# ಚಂದಮಾಮ

(ಮಾರ್ಚ್–'೭೮) ಈ ಸಂಚಿಕೆಯಲ್ಲಿ


| | | | | | |
|---|---|---|---|---|---|
| ಅಮರವಾಣಿ | ... | ೬ | ದೇವರ ಸೊತ್ತು | ... | ೩೪ |
| ಕಾಕೋಲೂಕೀಯ | ... | ೭ | ಗರ್ವ ಕರಗಿತು | ... | ೩೮ |
| ಮಾಯಾಸರೋವರ | ... | ೧೧ | ತಿರುಗಿ ಬರುವ ವರಗಳು | ... | ೪೧ |
| ಬಿಕಾರಿ ಯೋಗಿ | ... | ೧೯ | ಉತ್ತಮ ಮಾರ್ಗ | ... | ೪೨ |
| ಬುದ್ಧಿವಂತಿಕೆ | ... | ೨೪ | ತರ್ಕ ಶಾಸ್ತ್ರ | ... | ೪೫ |
| ಕಳೆಯ ಕೂಲಿ | ... | ೨೫ | ಜೋಯಿಸನ ಅದ್ಭುತ | ... | ೪೭ |
| ಸಾಂಗತ್ಯ ಪ್ರಭಾವ | ... | ೩೦ | ವೀರ ಹನುಮಾನ್ | ... | ೫೧ |
| ಲಂಚವೆಂದರೆ ಆದೇ | ... | ೩೩ | ಬೇಕಾದಾಗಿನ ಬಹುಮಾನ | ... | ೫೯ |


Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor : NAGI REDDI.

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಕೆಲವು ಮಂದಿ ಧೂರ್ತರು ಪಾಮರಜನರನ್ನು ವಶಪಡಿಸಲು ಅನೇಕ ಬಗೆಯ ಮಾಯೋಪಾಯಗಳನ್ನು ಮಾಡುತ್ತಾರೆ. ವೇಷ ಭಾಷೆಗಳಿಂದ ಮೋಸಹೋಗುವ ಜನರೂ ಬೇಕಾದಷ್ಟಿರುತ್ತಾರೆ. ಆದರೆ ಎಲ್ಲರನ್ನೂ ಎಲ್ಲ ಕಾಲದಲ್ಲಿಯೂ ಮೋಸಪಡಿಸಲು ಸಾಧ್ಯವಿಲ್ಲ. ಎಲ್ಲರೂ ಪಾಮರರಲ್ಲ. ಯಾವನೋ ಒಬ್ಬ ಬುದ್ಧಿವಂತನಿಂದ ಅವರ ವೇಷ ಬಯಲಾಗುವವರೆಗೆ ಲಾಭ ಸಂಪಾದಿಸುತ್ತಾರೆ. ಇದು ಈ ಸಂಚಿಕೆಯ "ಜೋಯಿಸನ ಅದ್ಭುತ" ಎಂಬ ಕಥೆಯಲ್ಲಿದ್ದರೆ, "ಬಿಕಾರಿಯೋಗಿ" ಎಂಬ ಬೇತಾಳ ಕಥೆಯಲ್ಲಿ, ತನ್ನ ಪ್ರಯತ್ನವೇನಿಲ್ಲದೆಯೇ ದೈವಿಕಶಕ್ತಿಗಳಿರುವಂತೆ ಜನರಿಗೆ ನಂಬಿಗೆಯಾಗಿ ಲಾಭಪಡೆಯುವ ಅವಕಾಶವಿದ್ದರೂ, ಅದನ್ನು ನಿರಾಕರಿಸುತ್ತಾನೆ—ಇನ್ನೊಬ್ಬ. ಇಂಥ ಇಬ್ಬಗೆಯವರೂ ಇದ್ದಾರೆ, ಪ್ರಪಂಚದಲ್ಲಿ.

ಸಂಪುಟ: ೬೦ ಮಾರ್ಚಿ '೭೮ ಸಂಚಿಕೆ: ೩

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦






ನಹ್ಯತೋ ಧರ್ಮಚರಣಂ
ಕಿಂಚಿದಸ್ತಿ ಮಹತ್ತರಮ್
ಯಥಾ ಪಿತರಿ ಶುಶ್ರೂಷಾ
ತಸ್ಯ ವಾ ವಚನಕ್ರಿಯಾ ೧.

ತಂದೆಯ ಸೇವೆ ಮಾಡುವುದು, ತಂದೆಯ ಮಾತು ಪಾಲಿಸುವುದು ದೊಡ್ಡ ಧರ್ಮವಾಗಿದೆ.

ಅಸ್ಮಾಕಂ ಚ ಕುಲೇ ಪೂರ್ವಂ
ಸಗರಸ್ಯಾಜ್ಞಯಾ ಪಿತುಃ
ಖನರ್ಭಿಸ್ಸಾಗರೈರ್ಭೂಮಿ
ಮವಾಪ್ತಸ್ಸುಮಹಾನ್ವಧಃ ೨.

ಪೂರ್ವದಲ್ಲಿ ನಮ್ಮ ಸೂರ್ಯವಂಶದಲ್ಲಿ ಸಗರನ ಆಜ್ಞಾನುಸಾರವಾಗಿ ಭೂಮಿಯನ್ನು ಅಗೆದು ಅವನ ಮಕ್ಕಳು ಸತ್ತರು.

ಜಮದಗ್ನ್ಯೇನ ರಾಮೇಣ
ರೇಣುಕಾಜನನೀ ಸ್ವಯಂ
ಕೃತ್ತಾ ಪರಶುನಾರಣ್ಯೇ
ಪಿತುರ್ವಚನ ಕಾರಿಣಾ ೩.

ಜಮದಗ್ನಿಯ ಮಗ ಪರಶುರಾಮನು ತಂದೆಯ ಮಾತನ್ನು ಪಾಲಿಸಿ ಅರಣ್ಯದಲ್ಲಿ ತನ್ನ ತಾಯಿಯಾದ ರೇಣುಕೆಯನ್ನು ಕೊಡಲಿಯಿಂದ ಕೊಂದನು.

---

ಪಿತೃವಾಕ್ಯ—೧

---



# ಕಾಕೋಲೂಕೀಯ

೫೭

ಅರಿಮರ್ದನ ಗೂಗೆ ಪ್ರಾಕಾರ ಕರ್ಣವನ್ನು ನೋಡಿ "ನಿನ್ನ ಅಭಿಪ್ರಾಯವೇನು ?" ಎಂದು ಕೇಳಿತು.

"ಪ್ರಭೂ, ಈ ಕಾಗೆಯನ್ನು ಕೊಲ್ಲಬಾರದು. ಇದನ್ನು ಕಾಪಾಡಿದರೆ, ಇದು ನಮಗೆ ಆಪ್ತಮಿತ್ರನಾಗಿ ಸಲಹಾದಾರಿಕೆ ಮಾಡಲು ಸಾಧ್ಯವಿದೆ. ನಿನ್ನ ಮಿತ್ರನನ್ನು ಎಂದಿಗಾದರೂ ಶತ್ರುವಾಗಬಹುದೆಂಬ ದೃಷ್ಟಿಯಲ್ಲಿ ನೋಡುವುದೂ, ಶತ್ರುವನ್ನು ಎಂದಾದರೂ ಮಿತ್ರನಾಗುವನೆಂದು ನೋಡುವುದೂ ರಾಜನೀತಿಯಾಗಿದೆ. ರಾಜನೀತಿಯಲ್ಲಿ ಯಾವುದೂ ಒಂದೇ ವಿಧವಾಗಿರುವುದಿಲ್ಲ. ಆಗಾಗ ಒಂದಕ್ಕೊಂದು ವಿರುದ್ಧವಾಗುತ್ತದೆ. ರಾಜಕುಮಾರನ ಹೊಟ್ಟೆಯಲ್ಲಿ ಹಾವು ಎಂಬ ಕಥೆಯಲ್ಲಿ ನಾವು ಕಲಿಯಬೇಕಾದ ಪಾಠ ಇದೇ ತಾನೇ ?" ಎಂದಿತು ಪ್ರಾಕಾರಕರ್ಣ.

"ಅದೇನು ಕಥೆ ?" ಎಂದು ಅರಿಮರ್ದನವು ಕೇಳಲು, ಪ್ರಾಕಾರಕರ್ಣವು ಆ ಕಥೆಯನ್ನು ಹೇಳಿತು:

ಒಂದಾನೊಂದು ರಾಜ್ಯವನ್ನು ದೇವಶಕ್ತಿ ಎಂಬ ರಾಜನು ಪಾಲಿಸುತ್ತಿದ್ದನು. ಅವನ ಏಕಪುತ್ರನೇ ಯುವರಾಜ.

ಆದರೆ ಅವನ ಹೊಟ್ಟೆಯಲ್ಲಿ ಒಂದು ಹಾವು ಸೇರಿಕೊಂಡುದರಿಂದ ಅವನು ದಿನದಿನಕ್ಕೆ ಸೊರಗಿಹೋಗುತ್ತಿದ್ದನು. ಅವನು ಏನು ತಿಂದರೂ, ಔಷಧವನ್ನೂ ಸಹಾ ಆ ಹಾವೇ ತಿಂದು ಅಲ್ಲಿಯೇ ಉಳಿದಿತ್ತು. ವೈದ್ಯರಿಂದ ಏನೂ ಮಾಡಲಾಗದೆ ಹೋಯಿತು. ದೇವಶಕ್ತಿ ತುಂಬ ಖಿನ್ನನಾಗಿ ದೇವಾಲಯಕ್ಕೆ ಹೋಗಿ ತನ್ನ ಮಗನ ಹೊಟ್ಟೆಯೊಳಗಿರುವ ಹಾವನ್ನು ತೊಲಗಿಸುವಂತೆ ದೇವತೆಗಳನ್ನು ಬೇಡಿಕೊಂಡನು. ದೇವರೂ ಕರುಣಿಸಲಿಲ್ಲ.

ಕಡೆಗೆ ತನ್ನ ಹಿತಚಿಂತಕರಾದ ಮಂತ್ರಿಗಳ ಸಲಹೆಯಂತೆ ಹೇಗೋ ಉಪಾಯದಿಂದ ತನ್ನ ಮಗನಿಗೆ ಹೊರದೇಶದ ಒಬ್ಬಳು ರಾಜಕುಮಾರಿಯೊಂದಿಗೆ ಮದುವೆಯನ್ನೂ ಮಾಡಿದನು.

ಈ ರಾಜಕುಮಾರಿ ಬಹಳ ಬುದ್ಧಿವಂತೆಯಾಗಿದ್ದಳು. ಒಂದು ದಿನ ಅವಳು ಹೊರಗೆ ಹೋಗಿ ಹಿಂದಿರುಗಿ ಬರುವಾಗ, ತನ್ನ ಗಂಡ ಒಂದು ಹುತ್ತದ ಮೇಲೆ ತಲೆ ಇಟ್ಟುಕೊಂಡು ಮಲಗಿ ನಿದ್ದೆ ಮಾಡುತ್ತಿರುವುದನ್ನು ನೋಡಿದಳು.



ಹೊಟ್ಟೆಯಲ್ಲಿರುವ ಹಾವಿನಿಂದಲೇ ಅವನ ಬುದ್ಧಿ ಹಾಗೆ ಹೋಗಿರಬೇಕೆಂದು ಅವಳು ಊಹಿಸಿದಳು. ಅದಕ್ಕೆ ಸರಿಯಾಗಿ ಆಗ ರಾಜಕುಮಾರನ ಬಾಯಿಯಿಂದ ಹಾವು ಇಣಿಕಿ ನೋಡುತಿತ್ತು.

ಆ ಸಮಯದಲ್ಲಿ ಹುತ್ತ ದೊಳಗಿನ ಹಾವು ಕೂಡಾ ತಲೆ ಹೊರಗೆ ಹಾಕಿತು. ಅವೆರಡೂ ಏನೋ ಮಾತಾಡಲು ತೊಡಗಿದುವು. ಹುತ್ತದೊಳಗಿನ ಹಾವು, ರಾಜಕುಮಾರನ ಹೊಟ್ಟೆಯ ಹಾವಿನೊಂದಿಗೆ, "ಏನೇ, ನನ್ನ ನೋಡಿ ಗೇಲಿಯಾ ಮಾಡ್ತೀ? ಸುಂದರರಾಜಕುಮಾರನ ಹೊಟ್ಟೇಲಿ ಇದ್ದೇನೆಂತಲೋ? ರಾಜಭೋಗ ಪಡೆಯುತ್ತಿರುವ ಜಂಬವೋ?" ಎಂದಿತು.

"ಹೋಗೇ ಸೊಕ್ಕಿನವಳೆ! ನಿನ್ನ ಹುತ್ತದೊಳಗೆ ನಿಧಿ ಇಟ್ಟುಕೊಂಡಿದ್ದೇನೆಂಬ ಜಂಬ ನಿನಗೆ! ಅದನ್ನು ಮುರಿಯಬೇಕಾದರೆ ಎಷ್ಟು ಹೊತ್ತು? ಒಂದಿಷ್ಟು ಕುದಿಕುದಿ ನೀರು ಹುತ್ತಕ್ಕೆ ಹೊಯ್ದುಬಿಟ್ಟರೆ ನಿನ್ನ ಜಂಬ ಗೋವಿಂದಾ!" ಎಂದು ಹೇಳಿ ಹೊಟ್ಟೆಯ ಹಾವು ಕಿಸಕಿಸನೆ ನಕ್ಕಿತು.

"ನೀನು ಮಾತ್ರ ಏನಂತೆ? ಕರಿಸಾಸಿವೆ, ಮೆಣಸಿನಕಾಯಿ, ಓಮಕಷಾಯಿ ಮಾಡಿ ಕುಡಿದಾ ಅಂದ್ರೆ ನಿನ್ನ ಗತಿಯೂ ಗೋವಿಂದಾ! ಯಾವ ವೈದ್ಯನಿಗಾದರೂ ಈ ಉಪಾಯ ತಟ್ಟದೆ ಬಿಡುತ್ತೆ ಅಂದು ಕೊಂಡಿಯಾ? ನೋಡುತ್ತಾ ಇರು." ಎಂದಿತು ಹುತ್ತದಲ್ಲಿದ್ದ ಹಾವು.

ಮರದ ಮರೆಯಲ್ಲಿದ್ದು ಈ ಸಂಭಾಷಣೆ ಕೇಳಿದ ರಾಜಕುಮಾರಿ ಸದ್ದಿಲ್ಲದೆ ಹೊರಟುಹೋಗಿ, ಹುತ್ತದ ಹಾವು ಹೇಳಿದ ಪ್ರಕಾರ ಕಷಾಯ ಮಾಡಿ ಗಂಡನಿಗೆ ಕುಡಿಸಿದಳು. ಸ್ವಲ್ಪ ಹೊತ್ತಿನಲ್ಲಿ ಹೊಟ್ಟೆಯೊಳಗಿನ ಹಾವು ಸಾಯುತ್ತಾ ಹೊರಬಿದ್ದು ಸತ್ತಿತು. ಆದರಿಂದ ರಾಜಕುಮಾರನಿಗೆ ಸಂಪೂರ್ಣ ಆರೋಗ್ಯವೂ ಕಳೆಯೂ ಬಂದಿತು.

ಆಮೇಲೆ ಅವಳು ಹುತ್ತಕ್ಕೆ ಕುದಿಯುವ ನೀರನ್ನು ಸುರಿದು ಹಾವನ್ನು ಕೊಂದು ಅದರೊಳಗಿದ್ದ ನಿಧಿಯನ್ನು ಹೊರಗೆ ತೆಗೆಯಿಸಿದಳು. ಹೀಗೆ ಹಾವುಗಳು ಶತ್ರುವಾದರೂ ಬೇಕಾದ ಉಪಾಯ ಅವುಗಳಿಂದಲೇ ದೊರೆಯಿತಲ್ಲ?

ಅರಿಮರ್ದನ ಗೂಗೆ ತನ್ನ ಐದು ಮಂದಿ ಮಂತ್ರಿಗಳ ಅಭಿಪ್ರಾಯವನ್ನೂ ತಿಳಿದ ಮೇಲೆ ಅಧಿಕ ಸಂಖ್ಯೆಯವರ ಆಲೋಚನೆಯನ್ನು ಸ್ವೀಕರಿಸಿತು. ತನ್ನ ಆಲೋಚನೆಯನ್ನು ನಿರಾಕರಿಸಿದುದನ್ನು ನೋಡಿ ರಕ್ತಾಕ್ಷಿ, "ಸೋದರರೇ, ನೀವುಗಳು ನಿಮ್ಮ ಆಲೋಚನೆಯಿಂದ ರಾಜನಿಗೆ ಮರಣದಂಡನೆ ವಿಧಿಸಿದಂತೆಯೇ ಮಾಡಿದ್ದೀರಿ. ನಿಮ್ಮ ಮೂಲಕ ರಾಜನು ಹಿಂದೆ ಹೆಂಡತಿಯನ್ನು ಪರೀಕ್ಷಿಸಿದ ಬಡಗಿಯ ಹಾಗೆ ಮೋಸ ಹೋಗಿಬಿಟ್ಟನು" ಎಂದಿತು.

"ಯಾವ ಬಡಗಿ? ಏನು ಕಥೆ?" ಎಂದು ಅರಿಮರ್ದನವೂ ಇತರ ಮಂತ್ರಿಗಳೂ ಕೇಳಿದುವು.

ಪಕ್ಷಿ ಆ ಬಡಗಿಯ ಕಥೆಯನ್ನು ಹೀಗೆ ಹೇಳಿತು: ಆ ಬಡಗಿಗೆ ಒಬ್ಬಳು ಹೆಂಡತಿಯಿದ್ದಳು. ಅವಳು ಒಳ್ಳೆಯವಳಲ್ಲವೆಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು. ಇದು ಆ ಬಡಗಿಯ ಕಿವಿಗೂ ಬಿದ್ದಿತು. ಬಹಳಸಾರಿ ಆ ಮಾತು ಕೇಳಿದ ಮೇಲೆ ಅವನಿಗೆ ಅವಳನ್ನು ಪರೀಕ್ಷೆ ಮಾಡಬೇಕೆಂದು ತೋರಿತು.

ಒಂದು ದಿನ ಅವನು ಹೆಂಡತಿಯೊಂದಿಗೆ "ನಾನು ನಾಳೆ ದೂರ ಪ್ರಯಾಣ ಮಾಡುತ್ತೇನೆ. ಕೆಲವು ದಿನಗಳವರೆಗೆ ಬರಲಾರೆ." ಎಂದನು. ಈ ಮಾತು ಕೇಳಿ ಕಳ್ಳನ ಜೀವ ಹುಳ್ಳಹುಳ್ಳಗೆ ಎಂಬಂತೆ ಅವಳು ಸಂದೇಹ ಪಟ್ಟರೂ ಗಂಡನಿಗೆ ಬಗೆಬಗೆಯ ತಿಂಡಿಗಳನ್ನು ಮಾಡಿಕೊಟ್ಟಳು.

ಮಾರುದಿನ ಬೆಳಿಗ್ಗೆ ಬಡಗಿ ಮನೆಯಿಂದ ಹೊರಟು ಹೋದನು. ಆಮೇಲೆ ಹೆಂಡತಿ ದೇವದತ್ತನೆಂಬ ತೌರುಮನೆಯ ಒಬ್ಬ ಗೆಳೆಯನ ಮನೆಗೆ ಹೋಗಿ, ತಾನೊಬ್ಬಳೇ ಇರುವುದನ್ನು ತಿಳಿಸಿ, ರಾತ್ರಿ ಭಯವಾಗುವುದರಿಂದ ಅವನನ್ನು ತನ್ನ ಮನೆಗೆ ಬರಲು ಹೇಳಿದಳು.

ಬಡಗಿ ಹಗಲಲ್ಲಿ ಎಲ್ಲೆಲ್ಲೋ ತಿರುಗಿ ಕತ್ತಲಾದ ಮೇಲೆ ಮನೆಯ ಹಿಂದಿನ ಬದಿಯಿಂದಾಗಿ ಬಂದು, ಹೆಂಡತಿಗೆ ತಿಳಿಯದಂತೆ ಒಳಗೆ ಹೊಕ್ಕು, ಮಂಚದ ಕೆಳಗೆ ಅಡಗಿದನು. ಅವಳು ಆ ಗೆಳೆಯನಿಗಾಗಿ ಆ ಮಂಚದಲ್ಲಿ ಹಾಸಿಗೆ ಹಾಸಿ, ಕುಳಿತು ಸರಿ ಮಾಡುವಾಗ, ಮಂಚದಡಿಯಲ್ಲಿದ್ದ ಗಂಡನ ಗುಟ್ಟು ಗೊತ್ತಾಯಿತು. ಆಗಲೇ ದೇವದತ್ತನೂ ಬಂದ.

ಕೂಡಲೇ ಅವಳು, "ಬನ್ನಿ, ಮಂಚದಲ್ಲಿ ಕೂಡಿ. ಮಹಾ ಪತಿವ್ರತೆಯರಿಗೆ ಒಳ್ಳೇದೂ ಅಂತ ನಾನು ದಿನಾ ಕಾಳಿಯನ್ನು ಪೂಜಿಸುತ್ತೇನೆ. ಈದಿನ ಕನಸಿನಲ್ಲಿ ದೇವಿ, ನನ್ನ ಗಂಡ ಆರು ತಿಂಗಳಲ್ಲಿ ತೀರಿಹೋಗುತ್ತಾನೆಂದೂ, ಅದನ್ನು ತಪ್ಪಿಸಬೇಕಾದರೆ ಯಾವನ ಪಾದದಲ್ಲಾದರೂ ನನ್ನ ಪಾತಿವ್ರತ್ಯ ಸಮರ್ಪಿಸಿ ಕಣ್ಣಿಗೊತ್ತಿಕೊಳ್ಳಬೇಕೆಂದೂ ಹೇಳಿದಳು. ಅದಕ್ಕೇ ಗಂಡನಿಲ್ಲದಿರುವಾಗ ಬರಲು ಹೇಳಿದೆ." ಎಂದು ಹೇಳಿ ಬೊಗಸೆಯಲ್ಲಿಷ್ಟು ನೀರು ಹಾಕಿ, 'ಪಾತಿವ್ರತ್ಯಕ್ಕಿಂತಲೂ ಪತಿಯೇ ಮುಖ್ಯ!' ಎಂದು ಅವನ ಪಾದಕ್ಕೆ ನೀರು ಬಿಟ್ಟು, ಕಣ್ಣಿಗೊತ್ತಿಕೊಂಡು, ಕಣ್ಣು ಸನ್ನೆ ಮಾಡಿ "ಇನ್ನು ಹೋಗಿ. ನಿಮಗೆ ತೊಂದರೆ ಕೊಟ್ಟ ಹಾಗಾಯಿತು" ಎಂದು ಹೇಳಿ ಅವನನ್ನು ಕಳುಹಿಸಿಯೂ ಬಿಟ್ಟಳು. ಅವನು ಆಶ್ಚರ್ಯದಿಂದ ಪಿಳಿಪಿಳಿ ನೋಡಿ ಮಾತಾಡದೆ.ಹೊರಟುಹೋದ.

ಅದನ್ನು ನಂಬಿದ ಬಡಗಿ ಬೆಳತನಕ ಅಲ್ಲೇ ಇದ್ದು, ಆಮೇಲೆ ಕಳ್ಳನಂತೆ ಹೊರಗೆ ಹೋಗಿ ಊರಿಂದ ಬಂದವನಂತೆ ಬಂದನು. ಅವನ ಸಂದೇಹ ಅಳಿದುಹೋಯಿತು.



# ೧೯೪. ಅನಾಗರಿಕ ಸಾಮರ್ಥ್ಯ

ದಕ್ಷಿಣ ಅಮೆರಿಕಾದ, ಪೆರೂವಿನಲ್ಲಿ ಕುಜ್ಕೋದ ಮೇಲುಗಡೆ ಗುಡ್ಡಗಳಲ್ಲಿ ಆದಿವಾಸಿಗಳು ವಿಸ್ಮಯಕರವಾದ ದುರ್ಗ ನಿರ್ಮಿಸಿದ್ದಾರೆ. ಚಿತ್ರದಲ್ಲಿ ಕಾಣುವ ಪ್ರಾಕಾರದ ಕಲ್ಲುಗಳು ಕೆಲವು ೧೫ ರಿಂದ ೨೦ ಅಡಿಗಳಷ್ಟು ಎತ್ತರವಾಗಿವೆ. ಅವುಗಳಲ್ಲಿ ಯಾವ ಗಚ್ಚಿನಹಚ್ಚಿಕೆಯೂ ಇಲ್ಲ. ಕಲ್ಲುಗಳ ಮಧ್ಯದಲ್ಲಿ ಚಾಕು "ಬ್ಲೇಡು" ಕೂಡಾ ತೂರದು. ಇದನ್ನು ನಿರ್ಮಿಸಿದವರು ಕಬ್ಬಿಣವನ್ನು ಅರಿಯರು. ಹುರಿಹಗ್ಗ ಮತ್ತು ಕಲ್ಲಿನ ಉಪಕರಣಗಳಂತಹ ಅನಾಗರಿಕ ಸಾಧನಗಳನ್ನೇ ಉಪಯೋಗಿಸಿದ್ದಾರೆ.





# ಬಿಕಾರಿಯೋಗಿ

ತನ್ನ ಜಿದ್ದು ಗಟ್ಟಿಯೋ ಬೇತಾಳದ ಜಿದ್ದು ಗಟ್ಟಿಯೋ ನೋಡದೆ ಬಿಡಲಾರೆನೆಂಬ ಹಟದಿಂದ ರಾಜಾ ತ್ರಿವಿಕ್ರಮನು ಮತ್ತೆ ಮರದಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತಿದ್ದ ಶವವನ್ನು ಕೆಳಗಿಸಿ ತನ್ನ ಭುಜದ ಮೇಲೆ ಹಾಕಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿರುವ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ, ನಿನ್ನ ಪ್ರಯತ್ನವು ಎಷ್ಟುಸಾರಿ ವಿಫಲವಾದರೂ ನೀನು ಮತ್ತೆ ಮತ್ತೆ ಪ್ರಯತ್ನಿಸುವುದನ್ನು ನೋಡಿ ಆಶ್ಚರ್ಯವಾಗುತ್ತದೆ. ಮಾನವ ಬುದ್ಧಿ ಯಾವ ಕ್ಷಣಕ್ಕೆ ಬದಲಾಗುತ್ತದೋ ಹೇಳಲಾಗದು. ಅದೃಷ್ಟವು ಅಂದಣವೇರಿಸಿದರೂ ಬೇಡವೆಂದು ಹೇಳಿ ಕಾಡುದಾರಿ ಹಿಡಿದು ಹೋದವರಿದ್ದಾರೆ. ಅದಕ್ಕೆ ನಿದರ್ಶನವಾಗಿ ಧನಗುಪ್ತನೆಂಬವನ ವಿಚಿತ್ರವಾದ ಕಥೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಕಥೆಯನ್ನು ಪ್ರಾರಂಭಮಾಡಿತು :

ಧನಗುಪ್ತನು ಒಬ್ಬ ವರ್ತಕನ ಮಗನು. ತಂದೆಯ ದೊಡ್ಡ ಆಸ್ತಿಗೆಲ್ಲಾ ಅವನೇ ಉತ್ತರಾಧಿಕಾರಿ.

---

## ಬೇತಾಳಕಥೆಗಳು?..



ಅವನಿಗೆ ಭೋಗಗಳ ಮೇಲೆಯೂ, ಭಾಗ್ಯದ ಮೇಲೆಯೂ ಸಮಾನವಾದ ಪ್ರೀತಿಯಿದ್ದಿತು. ಎರಡರಲ್ಲಿಯೂ ಕೊರತೆ ಇರಬಾರದೆಂದು ಭಾವಿಸುತ್ತಿದ್ದನು. ವ್ಯಾಪಾರ ಕಾರ್ಯಗಳಲ್ಲಿ ಭಾಗ್ಯವು ಬರುವುದೇನೋ ನಿಜ. ಆದರೆ ಬಂದ ಭೋಗಗಳನ್ನು ಅನುಭವಿಸಲು ಹೆಚ್ಚು ಕಾಲ ಉಳಿಯುತ್ತಿದ್ದಿಲ್ಲ.

ಇದಕ್ಕೇನು ಮಾಡುವುದೆಂದು ಆಲೋಚಿಸುವಾಗ ಅವನಿಗೆ ಜೂಜಿನ ನೆನಪು ಬಂತು. ಜೂಜಾಟದಲ್ಲಿ ಹೆಚ್ಚು ಹಣ ಸಂಪಾದಿಸಬಹುದು. ಕಾಲವೂ ಉಳಿಯುತ್ತದೆ. ಉತ್ಸಾಹವೂ ಹೆಚ್ಚುತ್ತದೆ.

ಓಗೆ ಭ್ರಮೆ ಪಟ್ಟು ಧನಗುಪ್ತನು ಜೂಜಾಡಲು ಪ್ರಾರಂಭ ಮಾಡಿದನು. ಅದೊಂದು ಚಟವಾಗಿ, ಬಹುಬೇಗದಲ್ಲಿ ತನ್ನ ಹತ್ತಿರ ಇದ್ದುದನ್ನೆಲ್ಲಾ ಕಳೆದುಕೊಂಡು ಬಿಕಾರಿಯಾಗಿ ಬೀದಿಗಿಳಿದನು.

ಈ ಆಘಾತದಿಂದ ಧನಗುಪ್ತನಿಗೆ ಜೀವನದ ಮೇಲೆಯೇ ಅಸಹ್ಯ ಹುಟ್ಟಿತು. ಆದುದರಿಂದ ಅವನು ಜೀವದ ಆಸೆ ಬಿಟ್ಟು, ಕ್ರೂರ ಮೃಗಗಳನ್ನು ಕೂಡಾ ಲಕ್ಷ್ಯ ಮಾಡದೆ ಅರಣ್ಯಕ್ಕೆ ಹೋಗಿ ಅಲ್ಲಿಯೇ ನಿವಾಸ ಏರ್ಪಡಿಸಿಕೊಂಡನು. ಯಾವ ಸಂಸ್ಕಾರವೂ ಇಲ್ಲದೆ ಕೆಲವೇ ದಿನಗಳಲ್ಲಿ ಗಡ್ಡ ಮೀಸೆಗಳು ಬೆಳೆದು ತಲೆ ಕೂದಲು ಜಡೆಗಟ್ಟಿ, ಶರೀರದಲ್ಲಿ ಕೊಳೆತುಂಬಿ ಹುಚ್ಚನ ರೂಪಕ್ಕೆ ಬದಲಾದನು.

ಆ ಕಾಡಿನಲ್ಲಿ ಧನಗುಪ್ತನಿರುವ ಪ್ರಾಂತಕ್ಕೆ ಸ್ವಲ್ಪ ದೂರದಲ್ಲಿ ಬೇಡರ ಹಳ್ಳಿ ಇದ್ದಿತು. ಅಲ್ಲಿ ಅನೇಕ ಮಂದಿ ಅನಾಗರಿಕರಾದ ಬೇಡಕುಲದವರು ವಾಸವಾಗಿದ್ದರು. ಆ ವರ್ಷ ಸರಿಯಾಗಿ ಮಳೆಬೀಳದೆ ಹೋದುದರಿಂದ ಬೇಡರು ತಮ್ಮ ಜೀವನದ ಅಗತ್ಯಗಳಿಗಾಗಿ ಹುಡುಕಾಡುತ್ತ ದೂರದೂರ ತಿರುಗಬೇಕಾಗಿ ಬಂದಿತು.

ಆ ವಿಧವಾಗಿ ದೂರ ಬಂದಿದ್ದ ಕೆಲಮಂದಿ ಬೇಡರು ಕಾಡಿನಲ್ಲಿರುವ ಧನಗುಪ್ತನನ್ನು ನೋಡಿದರು. ಉದ್ಧುದ್ಧವಾದ ಗಡ್ಡ ಮೀಸೆಗಳಿಂದ, ಯಾವುದೊಂದು ಆಯುಧವೂ ಇಲ್ಲದೆ ಒಬ್ಬಂಟಿನಾಗಿ ಕ್ರೂರ ಮೃಗಗಳಿರುವ ಅರಣ್ಯದಲ್ಲಿ ಕ್ಷೇಮವಾಗಿರುವ ಧನಗುಪ್ತನು ಮಹಾಶಕ್ತಿ ಸಂಪನ್ನನಾಗಿರಬೇಕೆಂದು ಅವರಿಗೆ ತೋರಿತು. ಅವರು ಅವನ ಮೇಲೆ ಭಯ ಭಕ್ತಿ ಭಾವವುಳ್ಳವರಾಗಿ, ಹಣ್ಣು, ಜೇನು ಮೊದಲಾದುವನ್ನು ತಂದಿಟ್ಟು ಅವನ ಕಾಲಬುಡದಲ್ಲಿ ಅಡ್ಡಬಿದ್ದು "ದಯಮಾಡಬೇಕು ಮಹಾನುಭಾವರೇ! ಎಂದು ಬೇಡಿಕೊಂಡರು.

"ನಿಮಗೇನುಬೇಕು ?" ಎಂದು ಧನಗುಪ್ತನು ಅವರನ್ನು ಕೇಳಿದನು.

"ದಯಮಾಡಿ ನೀವು ನಮ್ಮ ಕೇರಿಗೆ ಪಾದ ಬೆಳೆಸಿ ಅಲ್ಲಿಯೇ ಇರಬೇಕೆಂದು ಪ್ರಾರ್ಥಿಸುತ್ತೇವೆ. ನಿಮಗೆ ಏನೂ ತೊಂದರೆಯಾಗದಂತೆ ನಾವು ನೋಡಿಕೊಳ್ಳುತ್ತೇವೆ. ನೀವು ನಮ್ಮ ಕೇರಿಯಲ್ಲಿದ್ದರೆ ನಮಗೂ ಒಳ್ಳೆಯದಾದೀತು. ದಯಮಾಡಬೇಕು"

ಎಂದರು ಬೇಡರು ವಿನಯದಿಂದ ಬಗ್ಗಿ ಕೈಜೋಡಿಸಿ. ಧನಗುಪ್ತನು ಮರುಮಾತಾಡದೆ ಎದ್ದು ಅವರ ಕೇರಿಗೆ ಹೋದನು. ಅವನು ಅವರ ಕೇರಿಗೆ ಸಮೀಪಿಸುವಾಗಲೇ ಮೋಡ ಕವಿದು ಮಳೆಪ್ರಾರಂಭವಾಗಿ, ಜಡಿಮಳೆಯೇ ಸುರಿಯಿತು.

ಆದರಿಂದ ಬೇಡರಿಗೆ ಧನಗುಪ್ತನ ಮಹತ್ತಿನಲ್ಲಿ ನಂಬುಗೆ ದೃಢವಾಯಿತು. ಅಂದಿನಿಂದ ಬೇಡರ ಜೀವನವು ಸುಗಮವಾಗಿ ನಡೆಯತೊಡಗಿತು. ಅದಕ್ಕೆ ಕಾರಣ ಮಳೆ ಬಂದುದೇ ಆದರೂ, ತಮ್ಮ ಸುಖಾಗಮನಕ್ಕೆ ಧನಗುಪ್ತನ ಮಹಿಮೆಯೇ ಕಾರಣವೆಂದು ಬೇಡರು ಅಂದುಕೊಂಡರು. ಅವರೆಲ್ಲ ನಿಶ್ಚಿಂತರಾಗಿ ಬಹಳ ಉತ್ಸಾಹದಿಂದ ಅಡವಿಯಲ್ಲಿ ತಿರುಗುತ್ತಿದ್ದರು.

ಈ ಸಮಯದಲ್ಲಿ ಆ ದೇಶದ ರಾಜನಿಗೆ, ಕಾಡಿನಲ್ಲಿಯ ಬೇಡರು ಸೊಕ್ಕಿನಿಂದ ಬಹಳವಾಗಿ ವಿಜೃಂಭಿಸುತ್ತಿದ್ದಾರೆಂದೂ, ಅವರಿಂದ ರಾಜ್ಯಕ್ಕೆ ಅಪಾಯವಾಗುವಂತಿದೆಯೆಂದೂ ಗೊತ್ತಾಯಿತು. ಅವರನ್ನು ಅಡಗಿಸಲು ರಾಜನು ಸೇನೆಯನ್ನು ಕಳುಹಿಸಿದನು. ತಮ್ಮನ್ನು ರಕ್ಷಿಸಲು ಒಬ್ಬ ಮಹಾತ್ಮನಿದ್ದಾನೆಂಬ ಧೈರ್ಯದಲ್ಲಿ ಬೇಡರು ಸ್ವಲ್ಪವೂ ಹೆದರದೆ ಸಾಹಸದಿಂದ ಹೋರಾಡಿ ರಾಜನ ಸೈನ್ಯವನ್ನು ಸಾಯಬಡಿದು ಹಾಕಿಬಿಟ್ಟರು.

ಇದನ್ನು ನೋಡಿ ರಾಜನಿಗೆ ಆಶ್ಚರ್ಯವಾಯಿತು. ಕಾಡಾಡೀ ಬೇಡರಿಗೆ ಇಷ್ಟೊಂದು ಧೈರ್ಯ ಸಾಹಸಗಳು ಹೇಗೆ ಬಂದುವೆಂದು ತಿಳಿಯಲು ಗೂಢಚಾರರನ್ನು ಕಾಡಿಗೆ ಕಳುಹಿಸಿದನು. ಆ ಗೂಢಚಾರರು ರಹಸ್ಯದಲ್ಲಿ ಬಂದು, ಬೇಡರು ಧನಗುಪ್ತನನ್ನು ಪೂಜಿಸಿ ಅವನ ಸುತ್ತಲೂ ನೃತ್ಯ ಮಾಡುವುದನ್ನು ನೋಡಿದರು.

ಗೂಢಚಾರರು ಆ ಮಾತನ್ನು ರಾಜನಿಗೆ ತಿಳಿಸಿದರು. ರಾಜನು ಕೂಡಾ ಧನಗುಪ್ತನಲ್ಲಿ ದೊಡ್ಡ ಮಹತ್ವವಿರುವುದೆಂದು ನಂಬಿದನು. ಅಂತಹ ಮಹಾತ್ಮನಿಂದ ಬೇಡರು ಲಾಭ ಪಡೆಯುವುದಕ್ಕಿಂತಲೂ ತಾನು ಲಾಭ ಪಡೆಯುವುದೇ ಉಚಿತ





ವೆಂದು ರಾಜನಿಗೆ ತೋರಿತು. ಕೂಡಲೇ ರಾಜನು ಬೇಡರಿಗೆ ಗೊತ್ತಾಗದಂತೆ ರಹಸ್ಯವಾಗಿ ಧನಗುಪ್ತನಿಗೆ ಆಹ್ವಾನ ಕಳುಹಿಸಿದನು.

ಕಾಡಾಡೀ ಬೇಡರ ಬಳಿಯಲ್ಲೇ ಸುಖವಾಗಿರುವಾಗ, ರಾಜನ ಬಳಿಯಲ್ಲಿದ್ದರೆ ಇನ್ನೂ ಹೆಚ್ಚು ಚೆನ್ನಾಗಿದ್ದೀತೆಂದು ಧನಗುಪ್ತನಿಗೆ ತೋರಿತು. ಅಂತೆಯೇ ಅವನು ಬೇಡರಿಗೆ ತಿಳಿಯದಂತೆ ಅರಣ್ಯದಿಂದ ಹೊರಬಿದ್ದು ರಾಜಧಾನಿಯನ್ನು ಸೇರಿದನು.

ರಾಜನು ಅವನನ್ನು ಗೌರವದಿಂದ ಸ್ವಾಗತಮಾಡಿ ಉಪಚರಿಸಿ, ತಮ್ಮ ಹೆಸರೇನೆಂದು ಕೇಳಿದನು. "ಅನುಭವಾನಂದ" ಎಂದನು ಧನಗುಪ್ತ. ಈ ಸಾರಿಯೂ ವಿಚಿತ್ರವೇ ನಡೆಯಿತು. ಅನುಭವಾನಂದ ಸ್ವಾಮಿ ರಾಜನ ಅರಮನೆಗೆ ಕಾಲಿಟ್ಟ ಕೂಡಲೇ, ರಾಜನನ್ನು ಪೀಡಿಸಿಕೊಂಡಿದ್ದ ಕೀಲುವಾತದ ನೋವು ಗುಣವಾಗುತ್ತ ಬೇಗದಲ್ಲೇ ಮಾಯವಾಯಿತು. ರಾಜನು ವೈದ್ಯರನ್ನು ಪ್ರಶಂಸಿಸಿದರೂ, ಅವನು ಮನಸ್ಸಿನೊಳಗೆ ಅನುಭವಾನಂದಸ್ವಾಮಿಯ ಮಹಿಮೆಯಿಂದಲೇ ತನ್ನ ರೋಗವು ವಾಸಿಯಾಯಿತೆಂದು ಬಲವಾಗಿ ನಂಬಿದನು.

ರಾಜನು ಅನುಭವಾನಂದ ಸ್ವಾಮಿಗೆ ಒಳ್ಳೆಯ ಆಶ್ರಮವನ್ನು ನಿರ್ಮಿಸಿ ಎಲ್ಲಾ ಸೌಕರ್ಯಗಳನ್ನೂ ಮಾಡಿಸಿ ಕೊಟ್ಟನು. ರಾಜನ ಹಾಗೆಯೇ ಅಲ್ಲಿರುವ ಮುಖ್ಯಸ್ಥರೆಲ್ಲರೂ ಅನುಭವಾನಂದ ಸ್ವಾಮೀಜೀಯ ಪರಮ ಭಕ್ತರಾದರು.

ಸ್ವಾಮಿ ತೀರಾ ಮಿತಭಾಷಿ. ಅದೃಷ್ಟವೂ ಬೆಂಬಲಕ್ಕಿದ್ದುದರಿಂದ ಕಾಕತಾಳೀಯವಾಗಿ ಅವನು ಹೇಳಿದ ಮಾತುಗಳು ಬಹಳವಾಗಿ ನಿಜವಾಗುತ್ತಿದ್ದುವು. ಆದುದರಿಂದ ಆತನ ವಾಕ್‌ಶುದ್ಧಿಯ ಮೇಲೆ ಎಲ್ಲರಿಗೂ ಒಳ್ಳೆಯ ನಂಬುಗೆಯುಂಟಾಯಿತು.

ಹೀಗಿರುವಾಗ ಒಂದು ದಿನ ರಾಜನು ಅನುಭವಾನಂದ ಸ್ವಾಮಿಯ ಬಳಿಗೆ ಬಂದು, ತಾನು ಪರರಾಜ್ಯದ ಮೇಲೆ ದಂಡಯಾತ್ರೆಗೆ ಹೊರಡುವೆನೆಂದೂ, ತನಗೆ ಯುದ್ಧದಲ್ಲಿ ವಿಜಯವಾಗುವಂತೆ ಅನುಗ್ರಹಿಸಿ ಆಶೀರ್ವದಿಸಬೇಕೆಂದೂ ಕೇಳಿಕೊಂಡನು. ರಾಜನು ದಂಡಯಾತ್ರೆಗೆ ಹೋಗುವ ದೇಶದ ಹೆಸರನ್ನೂ ಹೇಳಿದನು.

ಅದು ಧನಗುಪ್ತನ ದೇಶವೇ. ಆದರೂ ಅನುಭವಾನಂದನು ಕೂಡಲೇ "ವಿಜಯೀಭವ!" ಎಂದು ಆಶೀರ್ವದಿಸಲೇಬೇಕಾಯಿತು. ಈ ಸಂದರ್ಭದಲ್ಲಿ ತನ್ನ ದೇಶದ ರಾಜನು ಯುದ್ಧದಲ್ಲಿ ಗೆಲ್ಲುವ ಅವಕಾಶವಿಲ್ಲವೆಂದೂ ಧನಗುಪ್ತನಿಗೆ ಗೊತ್ತಿತ್ತು.

ಅವನು ಅಂದುಕೊಂಡಂತೆಯೇ ರಾಜನು ಯುದ್ಧದಲ್ಲಿ ಗೆದ್ದು ಸಂತೋಷದಿಂದ ಹಿಂದಿರುಗಿ ಬಂದು ರಾಜ್ಯದಲ್ಲೆಲ್ಲಾ ವಿಜಯೋತ್ಸವ ನಡೆಸಿದನು. ವಿಜಯಕ್ಕೆ ಕಾರಣನಾದ ಅನುಭವಾನಂದ ಸ್ವಾಮಿಗೆ ಭಾರೀ ಪೂಜೆ ಉಪಚಾರ ಸನ್ಮಾನಗಳನ್ನು ಮಾಡಬೇಕೆಂದಿದ್ದನು. ಆದರೆ ಆಕಸ್ಮಿಕವಾಗಿ ಅನುಭವಾನಂದ ಸ್ವಾಮಿಯು

ಆಶ್ರಮವು ಖಾಲಿಯಾಗಿತ್ತು. ಅನುಭವಾನಂದನು ಎಲ್ಲಿ ಹೋದ ಏನಾದನೆಂಬುದು ಯಾರಿಗೂ ಗೊತ್ತಿರಲಿಲ್ಲ. ಆಮೇಲೆ ಎಂದೂ ಯಾರೂ ಅವನನ್ನು ನೋಡಲಿಲ್ಲ.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ಎಲೈ ಮಹಾರಾಜನೆ! ಈಗ ಹೇಳು. ಕಾಡಿನಲ್ಲಿ ಬೇಡರ ಕಣ್ಣಿಗೆ ಬಿದ್ದ ಕ್ಷಣದಿಂದಲೂ ಧನಗುಪ್ತನ ಅದೃಷ್ಟ ಒಳ್ಳೆಯದಾಯಿತು. ದಶೆ ಬದಲಾಯಿಸಿತು. ಅವನಿಗೆ ಜೀವಿತದ ಮೇಲೆ ಉಂಟಾದ ವಿರಕ್ತಿ ಕೂಡಾ ತಗ್ಗಿ ಹೋಯಿತು. ಆನಂದವನ್ನು ಅನುಭವಿಸಬೇಕೆಂದು ಅರಮನೆಗೂ ಬಂದನು. ಅವನೂ ಸಂತೋಷವಾಗಿದ್ದಂತೆಯೇ ತೋರಿತು. ಅಂತಹವನು ತಾನು ಉಚ್ಚ ದಶೆಗೆ ಸೇರಿಕೊಂಡಿರುವ ಸಮಯದಲ್ಲಿ ಎಲ್ಲಾ ಸುಖವನ್ನೂ ಬಿಟ್ಟು ಎಲ್ಲಿಗೋ ಹೋಗಿಬಿಟ್ಟನೇಕೆ? ತನ್ನ ಆಶೀರ್ವಾದದ ಪ್ರಭಾವದಿಂದ ತನ್ನ ದೇಶಕ್ಕೆ ಯುದ್ಧದಲ್ಲಿ ಅಪಜಯವಾಯಿತೆಂದು ತನ್ನ ಸಂತೋಷದ ಜೀವಿತವನ್ನು ತ್ಯಾಗ ಮಾಡಿದನೆ? ಅಥವಾ ತನ್ನ ದೇಶವನ್ನು ಜಯಿಸಿದವನಿಂದ ಗೌರವ ಪಡೆಯಲು ಇಷ್ಟವಿಲ್ಲದೆ ಹೋದನೆ? ಈ ಸಂದೇಹಗಳಿಗೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದೆಯೇ ಹೋದರೆ ನಿನ್ನ ತಲೆಯೊಡೆದು ಹೋಗುತ್ತದೆಂದು ತಿಳಿ!" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ತನ್ನ ದೇಶವು ಯುದ್ಧದಲ್ಲಿ ಗೆಲ್ಲುವ ಸಾಧ್ಯತೆ ಇಲ್ಲವೆಂಬ ಸಂಗತಿ ಮೊದಲೇ ಧನಗುಪ್ತನಿಗೆ ಗೊತ್ತಿತ್ತು. ತನ್ನ ವಾಕ್‌ಶುದ್ಧಿಯಲ್ಲಿ ಅವನಿಗೆ ನಂಬಿಗೆ ಇರುತ್ತಿದ್ದರೆ ವಿಜಯವಾಗಲೆಂದು ರಾಜನಿಗೆ ಆಶೀರ್ವದಿಸುತ್ತಿದ್ದಿಲ್ಲ. ತನ್ನಲ್ಲಿ ಎಂತಹ ಮಹಿಮೆಯಾದರೂ ಇರುತ್ತಿದ್ದರೆ ಜೂಜಾಟದಲ್ಲಿ ಅಷ್ಟರಮಟ್ಟಿಗೆ ಸೋತು ಬಿಕಾರಿಯಾಗುತ್ತಿದ್ದಿಲ್ಲ. ಆದರೆ ತನ್ನ ಆಶೀರ್ವಾದದ ಮಾತಿನ ಶಕ್ತಿಯಿಂದಲೇ ತನ್ನ ದೇಶವು ಶತ್ರುಗಳ ಪಾಲಾಯಿತೆಂದು ಎಲ್ಲರೂ ಹೇಳಿಕೊಳ್ಳುವ ಹಾಗಾಯಿತು. ಕೀರ್ತಿಯ ಭಾರವನ್ನು ಅಪಕೀರ್ತಿಯ ಭಾರದಂತೆ ಅವನಿಂದ ತಾಳಲಾಗಲಿಲ್ಲ. ಮತ್ತೊಂದು ಅಪಾಯದ ಭಯವೇನೆಂದರೆ ಯಾವ ಮಹತ್ತೂ ಇಲ್ಲದ ತನ್ನ ದಶೆ ಯಾವ ಕ್ಷಣಕ್ಕೂ ತಿರುಗಿ ತಾನು ಸಾಮಾನ್ಯ ಮನುಷ್ಯನೆಂಬ ಸಂಗತಿ ಬಯಲಾಗಲೂ ಬಹುದು. ಆಮೇಲೆ ಕಸಕ್ಕಿಂತಲೂ ಕಡೆಯಾಗಬೇಕಾಗುತ್ತದೆ. ಈ ಸ್ವಾಮಿ ಜೀವನವು ಅವನಾಗಿ ಬಯಸಿ ಪಡೆದುಕೊಂಡುದೂ ಅಲ್ಲ, ಇಷ್ಟು ಕಾರಣಗಳಿಂದ ಅವನು ಪತ್ತೆ ಇಲ್ಲದೆ ಹೊರಟು ಹೋಗಿದ್ದಾನೆ."

ಹೀಗೆ ರಾಜನಿಗೆ ಮೌನ ಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.



# ಬುದ್ಧಿವಂತಿಕೆ

ಹಿಂದೆ ನಗರದಲ್ಲಿ ಒಬ್ಬ ವರ್ತಕನ ಮನೆಯಲ್ಲಿ ಕಳ್ಳತನವಾಯಿತು. ಅವನ ಇಪ್ಪತ್ತು ಸಾವಿರ ವರಹದಷ್ಟು ಸೊತ್ತು ಹೋಯಿತು. ಮೊದಲೇ ಪರಮ ಪಿಸುಣನಾದ ಅವನಿಗೆ ಇಷ್ಟು ದೊಡ್ಡ ನಷ್ಟವೆಂದರೆ, ಎದೆ ನಿಂತು ಹೋಗುವಂತೆಯೇ ಆಯಿತು. ಅವನು ರಾಜನ ಬಳಿಯಲ್ಲಿ ಫಿರ್ಯಾದಿ ಮಾಡಿದನು. ರಾಜನು ಕಳ್ಳರನ್ನು ಹಿಡಿಯಲು ಪ್ರಯತ್ನಿಸುತ್ತಿದ್ದನು. ದಿನಗಳೆದಂತೆ ವರ್ತಕನಿಗೆ ಮನೋವ್ಯಾಧಿ ಹಿಡಿಯಿತು,

ಅವನು ಪ್ರತಿದಿನವೂ ನಗರದೊಳಗಿನ ದೇವಾಲಯಗಳಿಗೆ ಹೋಗಿ, ಅಲ್ಲಿಯ ದೇವರೊಂದಿಗೆ, "ದೇವಾ, ಶ್ರಾವಣ ಪೌರ್ಣಮಿ ದಿನದೊಳಗೆ ಹೋದ ಸೊತ್ತು ದೊರಕಿದರೆ ಅದೇದಿನ ನಿನಗೆ ಹತ್ತು ಸಾವಿರ ವರಹಾ ಕಾಣಿಕೆ ಕೊಡುತ್ತೇನೆ" ಎಂದು ಗಟ್ಟಿಯಾಗಿ ಹೇಳುತ್ತಿದ್ದನು.

ಹತ್ತು ದೇವಾಲಯಗಳಲ್ಲಿಯೂ ಹಾಗೇ ಹೇಳುವುದನ್ನು ಕೇಳಿ ಜನರು "ಇವನಿಗೆ ಹುಚ್ಚೇನೋ" ಎಂದು ಕೊಳ್ಳುತ್ತಿದ್ದರು, ಏಕೆಂದರೆ ಹೋದದ್ದು ಇಪ್ಪತ್ತು ಸಾವಿರವೇ.

ಇಷ್ಟರಲ್ಲಿ ರಾಜಭಟರ ಬುದ್ಧಿವಂತಿಕೆಯಿಂದಲೋ, ವರ್ತಕನ ಅದೃಷ್ಟದಿಂದಲೋ ಕಳ್ಳರು ಸಿಕ್ಕಿದರು. ವರ್ತಕನ ಕಳವಾದ ಸೊತ್ತೂ ಸಿಕ್ಕಿತು.

ಶ್ರಾವಣ ಪೌರ್ಣಮಿ ಬಂತು. ವರ್ತಕನು ಯಾವ ದೇವಾಲಯಕ್ಕೂ ಹರಕೆ ಸಲ್ಲಿಸಲಿಲ್ಲ. ಅರ್ಚಕರೆಲ್ಲಾ ಸೇರಿ ಅವನನ್ನು ಕೇಳಿದರು.

"ಹೌದು, ಈ ಕ್ಷಣದಲ್ಲೇ ಹರಕೆ ಸಲ್ಲಿಸಿಬಿಡುತ್ತೇನೆ. ಯಾವ ದೇವಾಲಯದ ದೇವರ ದಯದಿಂದ ಕಳುವಾದ ಸೊತ್ತು ಸಿಕ್ಕಿತೆಂದು ಗೊತ್ತಾಗುವುದಿಲ್ಲವಲ್ಲ?" ಎಂದ ವರ್ತಕ.





# ಕಳೆಯ ಕೂಲಿ

ಹಿಂದೆ ಸಿರಿಪುರವೆಂಬ ಗ್ರಾಮದಲ್ಲಿ ಧರ್ಮಯ್ಯನೆಂಬ ಕೃಷಿಕನೊಬ್ಬನಿದ್ದನು. ಅವನು ತನಗಿರುವ ಎರಡು ಎಕರೆ ಹೊಲಗಳನ್ನು ಸ್ವಂತ ಉಳುಮೆಮಾಡಿ ಸಾಕಾಗುವಷ್ಟು ಬೆಳೆ ತೆಗೆಯುತ್ತಿದ್ದನು. ಸಾಧ್ಯವಾದಷ್ಟು ತಾನೇ ಕಷ್ಟಪಟ್ಟು ದುಡಿಯುವನು. ಇನ್ನೊಬ್ಬರಿಗೆ ಸಹಾಯವಾಗಿ ಕೊಡುವನೇ ಹೊರತು, ಕೈಚಾಚಿ ಸಹಾಯ ಯಾಚನೆ ಮಾಡುವವನಲ್ಲ.

ಧರ್ಮಯ್ಯನ ನೆರೆಯಲ್ಲಿಯೇ ಭದ್ರಯ್ಯನೆಂಬ ದೊಡ್ಡ ಕೃಷಿಕನಿದ್ದನು. ಅವನಿಗೆ ಬಂಗಾರದಂತಹ ಇಪ್ಪತ್ತು ಎಕರೇ ಹೊಲಗದ್ದೆಗಳಿದ್ದುವು. ಅವನು ಅದರಲ್ಲಿ ಬರುವ ಫಲಿತದಿಂದ ತೃಪ್ತಿಯಾಗಿರುವುದನ್ನು ಬಿಟ್ಟು, ಬಡ್ಡಿಯ ವ್ಯವಹಾರ ಬೇರೆ ನಡೆಸಿಕೊಂಡಿದ್ದನು. ಈ ಬಗೆಯ ವ್ಯಾಪಾರದಿಂದ ಅವನು ಬಹಳ ಮಂದಿಯನ್ನು ಹೀರಿ ಹಿಪ್ಪೇ ಮಾಡುತ್ತಿದ್ದನು. ವಿಧಿ ಇಲ್ಲದೆ ಅವನ ಕೈಯಿಂದ ಸಾಲ ತೆಗೆದುಕೊಂಡವರು ಬಡ್ಡಿ ಕೊಟ್ಟು ಕೊಟ್ಟು ಅಶಕ್ತರಾಗಿ, ಅವನನ್ನು ನೋಡಿ ಹುಲಿಯಂತೆ ಭಯಪಡುತ್ತಿದ್ದರು.

ಆ ಊರಿನಲ್ಲಿ ಗ್ರಾಮಾಧಿಕಾರಿಯಾಗಿದ್ದವನು ಭದ್ರಯ್ಯನ ಮಿತ್ರನಾಗಿದ್ದು, ಅವನ ದಾಕ್ಷಿಣ್ಯದ ಉರುಳಿನಲ್ಲಿ ಸಿಕ್ಕಿಕೊಂಡು, ಅವನು ಹೇಳಿದಂತೆ ನಡೆಯುವ ಕೀಲುಬೊಂಬೆಯಂತಾಗಿದ್ದನು. ಅಂತಹ ಗ್ರಾಮಾಧಿಕಾರಿಯ ಬೆಂಬಲದಿಂದಾಗಿ ಭದ್ರಯ್ಯ ಸಿರಿಪುರವನ್ನು ಮಕುಟವಿಲ್ಲದ ರಾಜನಾಗಿ ಆಳಿಕೊಂಡಿದ್ದನು. ಬಡಜನರು ತಮಗೆ ಅನೀತಿಗಳು ನಡೆಯುತ್ತಿದ್ದರೂ ಮೌನವಾಗಿ ತಾಳಿಕೊಂಡಿದ್ದರು.

ಊರ ಜನರು ಅಲ್ಪಸ್ವಲ್ಪ ಸಹಾಯ ಮಾಡುವ ಧರ್ಮಯ್ಯನ ದೊಡ್ಡ ಗುಣವನ್ನು ಆಗಾಗ ಹೊಗಳಿಕೊಳ್ಳುತ್ತಿದ್ದರು. ತನಗಿಂತ ಬಡವನಾದ ಧರ್ಮಯ್ಯನನ್ನು ಜನರು ಹೊಗಳುವುದನ್ನು ಕೇಳುವಾಗ ಭದ್ರಯ್ಯನ ಹೊಟ್ಟೆಯಲ್ಲಿ ಕೆಟ್ಟ ಉರಿ ಏಳುತ್ತಿದ್ದಿತು. ಅದನ್ನು ತಣಿಸಿಕೊಳ್ಳಲು ಒಂದು ಸಂದರ್ಭವೂ ಬಂದಿತು.

ಒಂದು ದಿನ ಭದ್ರಯ್ಯನ ಎತ್ತುಗಳು ಧರ್ಮಯ್ಯನ ಹೊಲಕ್ಕೆ ನುಗ್ಗಿ ಬೆಳೆಯನ್ನೆಲ್ಲಾ ನಾಶ ಮಾಡಿದುವು. ಅದನ್ನು ನೋಡಿ ಧರ್ಮಯ್ಯನ ಕಣ್ಣುಗಳಲ್ಲಿ ನೀರು ತುಂಬಿತು. ಗ್ರಾಮಾಧಿಕಾರಿಯ ಬಳಿಗೆ ಹೋಗಿ ದೂರಿಕೊಳ್ಳುವುದರಿಂದ ಲಾಭವಿಲ್ಲವೆಂದು ಅವನಿಗೆ ಗೊತ್ತಿತ್ತು. ಆದುದರಿಂದ ಅವನು ದುಃಖಿ

ಸಿ. ಆರ್. ಚಂದ್ರ



ವನ್ನು ನುಂಗಿಕೊಂಡು ಸುಮ್ಮನಿದ್ದುಬಿಟ್ಟನು. ಆದರೆ ಭದ್ರಯ್ಯ ಅವನನ್ನು ಸುಮ್ಮನಿರಲು ಬಿಡಲಿಲ್ಲ. ಭದ್ರಯ್ಯ ತನ್ನ ಎತ್ತುಗಳನ್ನು ಸಾಯುವ ಹಾಗೆ ಹೊಡೆದನೆಂದು ಗ್ರಾಮಾಧಿಕಾರಿಯ ಹತ್ತಿರ ಫಿರ್ಯಾದಿ ಮಾಡಿದನು. ಗ್ರಾಮಾಧಿಕಾರಿ ಭದ್ರಯ್ಯನ ಕೈಯಿಂದ ಸಾಕಷ್ಟು ಲಂಚವನ್ನು ಮೇದು, ಧರ್ಮಯ್ಯ ನನ್ನು ಆ ಕಛೇರಿಗೆ ಕರೆಯಿಸಿದನು. ಗ್ರಾಮಾಧಿಕಾರಿಯ ಬಳಿಯಲ್ಲಿ ಭದ್ರಯ್ಯನೂ ಇದ್ದನು ಮೀಸೆ ತಿರುಗಿಸುತ್ತಾ.

"ಧರ್ಮಯ್ಯಾ, ನೀನು ಭದ್ರಯ್ಯನ ಎತ್ತುಗಳನ್ನು ಸಾಯುವ ಹಾಗೆ ಹೊಡೆದೆಯಂತೆ. ಇದಕ್ಕೆ ನಿನ್ನ ಉತ್ತರವೇನು?" ಎಂದು ಕೇಳಿದನು ಗ್ರಾಮಾಧಿಕಾರಿ.

ಈ ಪ್ರಶ್ನೆ ಕೇಳಿ ಧರ್ಮಯ್ಯ ಬೆರಗಾದನು. ಎತ್ತುಗಳು ಮೇದು ತನ್ನ ಬೆಳೆಯನ್ನು ಹಾಳು ಮಾಡಿದುದಕ್ಕೆ ತಾನು ಫಿರ್ಯಾದಿ ಮಾಡಬೇಕಾದ್ದು ಹೋಗಿ, ತನ್ನಮೇಲೆ ಫಿರ್ಯಾದಿಯೇ?

"ಅಯ್ಯಾ, ಭದ್ರಯ್ಯನವರ ಎತ್ತುಗಳು ನನ್ನ ಹೊಲದ ಬೆಳೆಯನ್ನೆಲ್ಲಾ ನಾಶ ಮಾಡಿದುವು. ಅವುಗಳನ್ನು ಶಬ್ದದ ಮೂಲಕ ಓಡಿಸಿದೆನೇ ಹೊರತು ಒಂದು ಪೆಟ್ಟು ಕೂಡಾ ಕೊಟ್ಟಿಲ್ಲ. ನಷ್ಟಕ್ಕೆ ಬಿದ್ದ ನನ್ನ ಮೇಲೆ ಹೀಗೆ ಆರೋಪಣೆ ಮಾಡುವುದು ನ್ಯಾಯವಲ್ಲ ಸ್ವಾಮಿ" ಎಂದ ಧರ್ಮಯ್ಯ.

"ಅಪರಾಧ ಮಾಡಿದೆಯೂ ಎಂದರೆ ನನಗೇ ಧರ್ಮ ಹೇಳಿಕೊಡಲಿಕ್ಕೆ ನೋಡುವೆಯಾ? ನಾವು ಮನಸ್ಸು ಮಾಡಿದೆವೆಂದರೆ ನಿನಗೆ ಈ ಸಿರಿಪುರದಲ್ಲಿ ಒಂದು ಹಿಡಿ ಅಕ್ಕಿಯೂ ಹುಟ್ಟದು. ನಿನ್ನನ್ನು ಕೇಳಿ ನಾನು ನ್ಯಾಯವಿಚಾರಣೆ ಮಾಡುತ್ತೇನೆಂದುಕೊಂಡೆಯೇನು? ನನ್ನ ತೀರ್ಪನ್ನು ಕೇಳು. ಭದ್ರಯ್ಯನ ಎತ್ತುಗಳನ್ನು ಹೊಡೆದುದಕ್ಕೆ ನೂರು ರೂಪಾಯಿ ನಷ್ಟ ಪರಿಹಾರವಾಗಿ ಅವರಿಗೆ ಕೊಡತಕ್ಕದ್ದು. ಅವನ ಎತ್ತುಗಳು ನಿನ್ನ ಹೊಲದಲ್ಲಿಯ ಕಳೆ ತೆಗೆದು ಹಾಕಿದುದಕ್ಕೆ ಅವುಗಳ ಕೂಲಿಯಾಗಿ ಮೇಲೆ ಐವತ್ತು ರೂಪಾಯಿ ಕೊಡಬೇಕು. ಒಟ್ಟು ಮೊತ್ತ ನೂರೈವತ್ತು ರೂಪಾಯಿಗಳನ್ನು ಭದ್ರಯ್ಯನಿಗೆ ಕೊಡತಕ್ಕದ್ದು." ಎಂದ ಗ್ರಾಮಾಧಿಕಾರಿ. ಧರ್ಮಯ್ಯ ದಿಗ್ಭ್ರಮೆಗೊಂಡು "ಎತ್ತುಗಳು ಕಳೆ ತೆಗೆಯುವುದೆಂದರೆ ಏನು ಸ್ವಾಮಿ?" ಎಂದನು.

ಗ್ರಾಮಾಧಿಕಾರಿ ಕೆಂಗಣ್ಣು ಮಾಡಿ ಹುಬ್ಬುಗಂಟು ಹಾಕಿ, "ನನ್ನ ತೀರ್ಪಿಗೆ ಎದುರಾಡಿದ್ದರಿಂದ ನ್ಯಾಯಾಸ್ಥಾನವನ್ನು ಅವಮಾನಪಡಿಸಿದ್ದೀಯಾ? ಇದಕ್ಕೆ ಐವತ್ತು ರೂಪಾಯಿ ಜುಲುಮಾನೆ ವಿಧಿಸಿದ್ದೇನೆ. ನಾಳೆ ಸಾಯಂಕಾಲದೊಳಗೆ ಇನ್ನೂರು ರೂಪಾಯಿ ತಂದು ಕಟ್ಟದೆ ಹೋದರೆ, ನಿನಗೆ ಪ್ರತ್ಯೇಕ ದಂಡನೆ ಕೊಡಬೇಕಾಗುತ್ತದೆ! ಜಾಗ್ರತೆ!" ಎಂದನು.

ಧರ್ಮಯ್ಯ ಕಣ್ಣೀರಿಳಿಸುತ್ತಾ ಅಲ್ಲಿಂದ ಹೊರಟನು. ಅವನು ತನ್ನ ಮನೆಗೆ ನಾಲ್ಕಾರು ಮನೆಗಳಾಚೆಗಿರುವ ರಾಮಯ್ಯನ ಬಳಿಗೆ ಹೋಗಿ ನಡೆದ ಸಂಗತಿ

ಯನ್ನೆಲ್ಲಾ ಹೇಳಿ ದುಃಖವನ್ನು ತೋಡಿಕೊಂಡನು. ರಾಮಯ್ಯನು ಧರ್ಮಯ್ಯನಂತೆಯೇ ಒಳ್ಳೆಯವನಾಗಿದ್ದನು. ಆದುದರಿಂದ ಇಬ್ಬರೂ ಒಳ್ಳೆಯ ಸ್ನೇಹಿತರಾಗಿದ್ದರು. ಧರ್ಮಯ್ಯ ಹೇಳಿದುದನ್ನು ಕೇಳಿ ರಾಮಯ್ಯನಿಗೂ ಬಹಳ ಸಂಕಟವಾಯಿತು. "ಇದು ಬಹಳ ಅನ್ಯಾಯ ಧರ್ಮಯ್ಯಾ! ನಿನಗೆ ತುಂಬಾ ಅನ್ಯಾಯವಾಯಿತು. ಇವರಿಗೆ ತಕ್ಕ ಬುದ್ಧಿ ಕಲಿಸಿಯೇ ಬಿಡಬೇಕು. ಮೊದಲು ನಾನು ಕೊಡುವ ಇನ್ನೂರು ರೂಪಾಯಿಯನ್ನು ತೆಗೆದುಕೊಂಡು ಹೋಗಿ ಆ ಪಾಪಿಗಳ ಮೋರೆಗೆ ಬಡಿದು ಬಾ. ಅದನ್ನು ಹೇಗೆ ವಾಪಸು ಕಾರಿಸಬೇಕೆಂದು ನೋಡುತ್ತೇನೆ. ಸಮಯ ಬಾರದೆ ಹೋಗದು" ಎಂದು ರೋಷದಿಂದ ಹೇಳಿ ಹಣವನ್ನು ಕೊಟ್ಟು ಧರ್ಮಯ್ಯನನ್ನು ಕಳುಹಿಸಿದನು. ಮಿತ್ರನ ಮಾತಿನಿಂದ ಧರ್ಮಯ್ಯನಿಗೂ ತುಸು ಸಮಾಧಾನವಾಯಿತು.

ಮಾರಣೇ ದಿನ ರಾಮಯ್ಯನು ಏನು ಮಾಡಿದನೆಂದರೆ, ಅವನು ತನ್ನ ಎತ್ತುಗಳನ್ನು ತೆಗೆದುಕೊಂಡು ಹೋಗಿ ಗ್ರಾಮಾಧಿಕಾರಿಯ ಬೆಳೆ ತುಂಬಿದ ಹೊಲಗಳಲ್ಲಿ ಮೇಯಲು ಬಿಟ್ಟನು. ಗ್ರಾಮಾಧಿಕಾರಿಯ ಆಳುಗಳು ಅದನ್ನು ನೋಡಿ ಓಡುತ್ತಾ ಹೋಗಿ ಗ್ರಾಮಾಧಿಕಾರಿಯೊಡನೆ ಆ ಸಂಗತಿಯನ್ನು ಹೇಳಿದರು. ಕೂಡಲೇ ಗ್ರಾಮಾಧಿಕಾರಿ ಓಟದ ನಡಿಗೆಯಿಂದ ತನ್ನ ಹೊಲಗಳ ಕಡೆಗೆ ಬಂದನು. ಆಗ ರಾಮಯ್ಯ ತನ್ನ ಎತ್ತುಗಳಿಗೆ ಕೆರೆಯಲ್ಲಿ ನೀರು ಕುಡಿಸಿಕೊಂಡಿದ್ದನು. ಹೊಲಗಳಲ್ಲಿ ತುಂಬ ನಾಶವಾಗಿದ್ದುವು. "ಇದೇನಯ್ಯ ರಾಮಯ್ಯ! ನೀನು ನನ್ನ ಹೊಲದಲ್ಲಿ ನಿನ್ನ ಎತ್ತುಗಳನ್ನು ಮೇಯಿಸಿದಿಯಂತಲ್ಲಾ? ಅಂ? ಏಕೆ? ಏನಾಯಿತು ನಿನಗೆ ಕೇಡುಕಾಲ?" ಎಂದು ಕೇಳಿದನು.

"ಏನಂದಿರಿ? ನಿಮ್ಮ ಹೊಲದಲ್ಲಿ ಎತ್ತುಗಳನ್ನು ಮೇಯಿಸಿದೆನೊ? ಯಾರೋ ಆಗದವರು ಏನೋ



ಚಾಡಿ ಹೇಳಿರಬೇಕು." ಎಂದ ರಾಮಯ್ಯ. "ನನ್ನ ಆಳುಗಳೇ ನೋಡಿ ಹೇಳಿದರು. ಹೊಲವೂ ಹೇಳುತ್ತದೆ. ನೀನೂ ಇರುವೆ, ನಿನ್ನ ಎತ್ತುಗಳೂ ಇಲ್ಲಿವೆ" ಎಂದ ಗ್ರಾಮಾಧಿಕಾರಿ.

"ಇದ್ದಮಾತ್ರಕ್ಕೆ ಎತ್ತುಗಳನ್ನು ಮೇಯಿಸಿದೆನೆಂದು ಅರ್ಥವೋ? ನಾನೂ ಎತ್ತುಗಳೂ ಊರಲ್ಲಿರಲೇ ಬಾರದೋ? ಹಾಗಿದ್ದರೆ ನಿಮ್ಮ ಕೈಲಾದ್ದು ಮಾಡಿ. ನನ್ನನ್ನೇನೂ ಕೇಳಬೇಡಿ" ಎಂದ ರಾಮಯ್ಯ.

"ಓಹೋ! ಪೊಗರು ಮಾತೋ? ಇರಲಿ. ನ್ಯಾಯಾಸ್ಥಾನದಲ್ಲಿ ಬುದ್ಧಿ ಕಲಿಸುತ್ತೇನೆ" ಎಂದು ಗ್ರಾಮಾಧಿಕಾರಿ, ಮನೆಗೆ ಧಾವಿಸಿ ದುಸ್ತು ಧರಿಸಿಕೊಂಡು ನಗರಕ್ಕೆ ಹೋದನು. ಅಲ್ಲಿಯ ನ್ಯಾಯಾಸ್ಥಾನದಲ್ಲಿ ರಾಮಯ್ಯನು ತನ್ನ ಬೆಳೆ ತುಂಬಿದ ಹೊಲವನ್ನು ಎತ್ತುಗಳಿಂದ ನಾಶಪಡಿಸಿದನೆಂದು, ತನಗೆ ನಷ್ಟಪರಿಹಾರ ಕೊಡಿಸಬೇಕೆಂದು ನ್ಯಾಯಾಧಿಕಾರಿಯೊಂದಿಗೆ ಫಿರ್ಯಾದಿ ಮಾಡಿದನು.

ಮರುದಿನ ನ್ಯಾಯಾಸ್ಥಾನದಲ್ಲಿ ಹಾಜರಾಗತಕ್ಕದೆಂದು ರಾಮಯ್ಯನಿಗೆ ಅಪ್ಪಣೆ ಬಂದಿತು. ರಾಮಯ್ಯನು ಧರ್ಮಯ್ಯನನ್ನೂ ಕರೆದುಕೊಂಡು ನಗರದ ನ್ಯಾಯಾಸ್ಥಾನಕ್ಕೆ ಹೋದನು. ನ್ಯಾಯಾಧಿಕಾರಿ ರಾಮಯ್ಯನನ್ನು ನೋಡಿ, "ನೀನು ಗ್ರಾಮಾಧಿಕಾರಿಯ ಹೊಲಗಳಲ್ಲಿ ನಿನ್ನ ಎತ್ತುಗಳನ್ನು ಮೇಯಿಸಿ ನಷ್ಟವುಂಟುಮಾಡಿದೆಯಂತೆ? ಇದಕ್ಕೆ ನಿನ್ನ ಸಮಾಧಾನವೇನು?" ಎಂದು ಕೇಳಿದನು.

"ತಾವು ನ್ಯಾಯಮೂರ್ತಿಗಳು. ತಮ್ಮ ಸನ್ನಿಧಿಯಲ್ಲಿ ನಿಜ ಸಂಗತಿ ಅರಿಕೆ ಮಾಡುತ್ತೇನೆ. ನಾನು ಗ್ರಾಮಾಧಿಕಾರಿಗಳ ಹೊಲದಲ್ಲಿ ಎತ್ತುಗಳನ್ನು ಮೇಯಿಸಿದ ಮಾತು ನಿಜವೇ ಆದರೂ ನನ್ನ ಎತ್ತುಗಳು ಕಳೆ ಹುಲ್ಲುಗಳನ್ನು ಮಾತ್ರವೇ ಮೇದಿವೆ. ಉಳಿದ ಬೆಳೆಗಳಿಗೆ ಯಾವ ನಷ್ಟವೂ ಉಂಟಾಗಲಿಲ್ಲ. ಅವರ ಹೊಲದ ಕಳೆ ತೆಗೆಯಿಸಿದ್ದಕ್ಕೆ ಕೂಲಿ ಅವರಿಂದ ಕೊಡಿಸಬೇಕು." ಎಂದನು ರಾಮಯ್ಯ.

ಇದನ್ನು ಕೇಳಿದ ನ್ಯಾಯಾಸ್ಥಾನದಲ್ಲಿದ್ದವರೆಲ್ಲಾ ಗೊಳ್ಳನೆ ನಕ್ಕರು. ನ್ಯಾಯಾಧಿಕಾರಿಗೆ ರಾಮಯ್ಯ ಹೇಳಿದ ಮಾತಿನಲ್ಲಿ ಏನೋ ಗೂಢಾರ್ಥವಿರುವಂತೆ ತೋರಿತು. "ಕಳೆ ತೆಗೆದ ಕೂಲಿ ಅಂದರೆ ಅದೇನು? ಹೀಗೊಂದು ಪದ್ಧತಿ ಹೊಸತಾಗಿದೆಯಲ್ಲಾ?" ಎಂದು ಕೇಳಿದನು.

"ಪ್ರಭುಗಳು ನ್ಯಾಯವನ್ನು ಪರಾಂಬರಿಸಬೇಕು, ಅದನ್ನು ಈ ಗ್ರಾಮಾಧಿಕಾರಿಯವರೇ ಪ್ರಾರಂಭಿಸಿದವರು. ಮೊನ್ನೆ ಭದ್ರಯ್ಯನ ಎರಡು ಎಕರೇ ಹೊಲದಲ್ಲಿ ಎತ್ತುಗಳಿಂದ ಕಳೆ ತೆಗೆಸಿದುದಕ್ಕೆ ಗ್ರಾಮಾಧಿಕಾರಿಗಳು ಐವತ್ತು ರೂಪಾಯಿ ಕೂಲಿ ಧರ್ಮಯ್ಯನಿಂದ ಕೊಡಿಸಿದರು. ಎರಡು ಎಕರೆಗೆ ಐವತ್ತು ಬಂದರೆ ಗ್ರಾಮಾಧಿಕಾರಿಯವರ ಏಳು ಎಕರೆಗಳಿಗೆ ಇನ್ನೂ ಹೆಚ್ಚು ಬರುತ್ತದಲ್ಲಾ ಅಂದುಕೊಂಡು ಅವರ ಹೊಲಗಳಲ್ಲಿ ನನ್ನ ಎತ್ತುಗಳಿಂದ ಮೇಯಿಸಿ ಕಳೆ ತೆಗೆಯಿಸಿದೆ. ಸ್ವಾಮಿ, ನ್ಯಾಯವಾಗಿ ನನಗೆ ಕಳೆ ತೆಗೆಸಿದ ಕೂಲಿ ಬರಬೇಕಲ್ಲವೇ? ಅದನ್ನು ಕೊಡಿಸಬೇಕೆಂದು ಪ್ರಾರ್ಥಿಸುತ್ತೇನೆ ಸ್ವಾಮಿ!" ಎಂದ ರಾಮಯ್ಯ.

ನ್ಯಾಯಾಧಿಕಾರಿ ಮತ್ತಿಷ್ಟು ವಿಚಾರಣೆ ಮಾಡಿ ನಡೆದ ಮೋಸವನ್ನೆಲ್ಲಾ ತಿಳಿದನು. ಧರ್ಮಯ್ಯನೂ ತನ್ನ ಸಂಗತಿ ಹೇಳಿದನು. ಭದ್ರಯ್ಯನೂ ಗ್ರಾಮಾಧಿಕಾರಿಯೂ ತಲೆ ತಗ್ಗಿಸಿದರು. ನ್ಯಾಯಾಧಿಕಾರಿ ಭದ್ರಯ್ಯನಿಂದ ಇನ್ನೂರು ರೂಪಾಯಿಯನ್ನೂ, ಮೇಲೆ ಐವತ್ತು ರೂಪಾಯಿ ಪರಿಹಾರವನ್ನೂ ಕೊಡಿಸಿ, ಗ್ರಾಮಾಧಿಕಾರಿಯನ್ನು ಪದವಿಯಿಂದ ತೊಲಗಿಸಿ, ಅದನ್ನು ರಾಮಯ್ಯನಿಗೆ ಕೊಡಿಸುವ ಏರ್ಪಾಡು ಕೂಡಾ ಮಾಡಿದನು. ಆಮೇಲೆ ಆ ಊರಿಗೆ ಒಳ್ಳೆಯ ಕಾಲ ಬಂದಿತು.



# ದುರಾಶೆ

**ಒಂ**ದು ಊರಿನಲ್ಲಿ ವಿಶ್ವನಾಥಶಾಸ್ತ್ರಿ ಎಂಬ ಪುರೋಹಿತ ಬ್ರಾಹ್ಮಣ ಪಂಡಿತನಿದ್ದನು. ಪೌರೋಹಿತ್ಯದಲ್ಲಿ ಆತನಿಗೆ ಬರುವ ಆದಾಯ ಬಲು ಕಡಿಮೆ. ಆದರೆ ತನ್ನ ಪಾಂಡಿತ್ಯದಿಂದ ಲಕ್ಷಲಕ್ಷವಾಗಿ ಗಳಿಸಿ ಖ್ಯಾತಿ ಪಡೆಯ ಬೇಕೆಂದು ಅವನಿಗೆ ತುಂಬಾ ಆಶೆ.

ಹಾಗಿರುವಾಗ ಆ ದೇಶದ ರಾಜನು ರುದ್ರಯಾಗವನ್ನು ಮಾಡುವುದಾಗಿ ಪ್ರಕಟಿಸಿ, ದೇಶದ ಪ್ರತಿ ಗ್ರಾಮದಲ್ಲಿರುವ ಬ್ರಾಹ್ಮಣ ಪಂಡಿತರಿಗೆಲ್ಲಾ ಆಹ್ವಾನ ಕಳುಹಿಸಿದನು. ಈ ಆಹ್ವಾನ ನೋಡಿದ ಕೂಡಲೇ ವಿಶ್ವನಾಥಶಾಸ್ತ್ರಿಗೆ ತನ್ನ ಕನಸು ಫಲಿಸುವ ಕಾಲಬಂದಂತೆ ತೋರಿತು. ಮಹಾರಾಜರ ಮುಂದೆ ತನ್ನ ಪಾಂಡಿತ್ಯ ವನ್ನು ತೋರಿಸಿ, ಆಸ್ಥಾನ ವಿದ್ವಾಂಸನಾಗಿ ಅಲ್ಲಿಯೇ ಇರಬಹುದೆನಿಸಿತು.

ಆ ಉದ್ದೇಶದಿಂದ ಅವನು ಊರೊಳಗಿನ ಪೌರೋಹಿತ್ಯಗಳನ್ನು ಬಿಟ್ಟು, ಇರುವ ಮನೆ ಕೂಡಾ ಮಾರಿ, ದುದ್ರಯಾಗ ಪ್ರಾರಂಭವಾಗುವ ದಿನವನ್ನು ಎದುರು ನೋಡಿಕೊಂಡಿದ್ದನು. ಊರೊಳಗಿನವರು ಇನ್ನೊಬ್ಬ ಪುರೋಹಿತ ಬ್ರಾಹ್ಮಣನನ್ನು ತಂದು ಊರಲ್ಲಿರಿಸಿಕೊಂಡರು.

ಇಷ್ಟರಲ್ಲಿ ರಾಜನಿಗೆ ಆರೋಗ್ಯ ಕೆಟ್ಟುದರ ಕಾರಣದಿಂದ ರುದ್ರಯಾಗವನ್ನು ಮುಂದಿನ ವರ್ಷ ಮಾಡುವು ದಾಗಿ ತೀರ್ಮಾನಿಸಿಬಿಟ್ಟರು. ವಿಶ್ವನಾಥಶಾಸ್ತ್ರಿ ಎರಡೂ ಇಲ್ಲದೆ, ಪೌರೋಹಿತ್ಯ ಹುಡುಕುತ್ತಾ ಬೇರೆ ಊರಿಗೆ ಹೊರಟುಹೋದನು.





# ಸಾಂಗತ್ಯಪ್ರಭಾವ

ಒಂದು ಊರಿನಲ್ಲಿ ವಲ್ಲಭನೆಂಬವನಿಗೆ ತನ್ನವರಾರೂ ಇಲ್ಲದಂತಹ ಪರಿಸ್ಥಿತಿಯುಂಟಾಯಿತು. ಬದುಕುವ ಆಧಾರಗಳೆಲ್ಲವೂ ತಪ್ಪಿಹೋದುವು. ಎಲ್ಲರಂತೆ ತಾನೂ ಬದುಕಬೇಕೆಂಬ ಆಶೆ ಅವನಿಗಿದ್ದಿತು. ಸ್ವಲ್ಪ ಕಾಲ ದಾರಿದ್ರ್ಯದಿಂದ ಕಷ್ಟಪಡುತ್ತಾ ಇದ್ದನು. ಕಡೆಗೆ ಮೋಸ ಮಾಡಿಯಾದರೂ ಹಣ ಸಂಪಾದಿಸಬೇಕೆಂದು ಅವನಿಗೆ ತೋರಿತು.

ಹೀಗಿರುವಾಗ ಆ ಊರಿಗೆ ದಿವ್ಯಾನಂದನೆಂಬ ಸಾಧುವಿನ ಆಗಮನವಾಯಿತು. ಅವನನ್ನು ಊರೊಳಗಿನ ಹಿರಿಯರೂ, ಧನಿಕರೂ ಒಳ್ಳೆಯ ರೀತಿಯಲ್ಲಿ ಆದರಿಸಿ, ಬೇಕಾದ ಎಲ್ಲಾ ಸೌಕರ್ಯಗಳನ್ನೂ ಮಾಡಿಕೊಟ್ಟರು. ಅವನು ತನ್ನ ಬಳಿಗೆ ಬರುವವರೆಗೆ ಒಳ್ಳೊಳ್ಳೆಯ ಬುದ್ಧಿ ನೀತಿಗಳನ್ನು ಬೋಧಿಸುತ್ತಿದ್ದನು. ಅವನ ಬೋಧನೆಗಳು ಎಲ್ಲರಿಗೂ ಒಪ್ಪಿಗೆಯಾಗಿ ತಲೆದೂಗಿಸುತ್ತಿದ್ದುವು. ಊರವರು ಸುಮ್ಮನೆ ಬಾರದೆ ಚಿನ್ನದ ನಾಣ್ಯಗಳಿಂದ ಚಿಕ್ಕಾಸಿನ ವರೆಗೂ ಯಥಾಶಕ್ತಿ ಕಾಣಿಕೆ ಕೊಟ್ಟು ಹೋಗುತ್ತಿದ್ದರು. ಹೀಗೆ ಆ ಸಾಧುವಿನ ಹತ್ತಿರ ಹಣವೂ ಸೇರುತ್ತಿದ್ದಿತು. ಇದನ್ನೆಲ್ಲಾ ನೋಡುತ್ತಿದ್ದ ವಲ್ಲಭನು ತನ್ನಲ್ಲಿ "ಈ ಸಾಧು ಎಲ್ಲಾ ಆಶೆಗಳನ್ನೂ ಬಿಟ್ಟಿದ್ದಾನೆ. ಅಂಥವನಿಗೆ ಈ ಚಿನ್ನ ಬೆಳ್ಳಿ ನಾಣ್ಯಗಳೆಲ್ಲಾ ಏತಕ್ಕೆ ? ಇದನ್ನೆಲ್ಲಾ ನಾನೇ ವಶಪಡಿಸಿಕೊಳ್ಳಬೇಕು" ಎಂದುಕೊಂಡನು. ಅವನು ದಿನಾ ಆ ಸಾಧುವನ್ನು ನೋಡಲು ಹೋಗುತ್ತ, ಅಲ್ಲಿಯ ಪರಿಸ್ಥಿತಿಗಳನ್ನೆಲ್ಲಾ ಚೆನ್ನಾಗಿ ತಿಳಿದುಕೊಂಡನು. ಆಮೇಲೆ ಒಂದು ದಿನ ಮಧ್ಯರಾತ್ರಿಯಲ್ಲಿ ಅವನು ಸಾಧುವಿನ ಆಶ್ರಮದೊಳಗೆ ಪ್ರವೇಶಿಸಿ ಅವನಿಗೆ ಬಂದ ಕಾಣಿಕೆಯ ಧನವನ್ನೆಲ್ಲಾ ಸಂಗ್ರಹಿಸಿ ಮೂಟೆ ಕಟ್ಟಿಕೊಂಡನು.

ಆಗ ಯಾವುದೋ ಸಣ್ಣದೊಂದು ಶಬ್ದವಾದುದರಿಂದ ಸಾಧುವಿಗೆ ಎಚ್ಚರಿಕೆಯಾಗಿ, ಕಣ್ಣು ತೆರೆದು ವಲ್ಲಭನು ಮಾಡುವ ಕೆಲಸವನ್ನು ನೋಡಿದನು. ಆಗ ವಲ್ಲಭನು ಒಂದಿಷ್ಟೂ ಹೆದರದೆ ಕತ್ತಿ ತೋರಿಸಿ ದಿವ್ಯಾನಂದ ಸಾಧುವನ್ನು ಹೆದರಿಸಿದನು.

ಆಗ ದಿವ್ಯಾನಂದನು ನಗುತ್ತ, "ಅದನ್ನೆಲ್ಲಾ ತೆಗೆದುಕೊಂಡು ಹೋಗಬೇಡವೆಂದು ನಾನು ಹೇಳಲಾರೆನಪ್ಪಾ. ನೀನು ಅವುಗಳನ್ನು ತೆಗೆದುಕೊಂಡು ಹೋಗಿ ಏನು ಮಾಡಬೇಕೆಂದಿರುವೆ ?" ಎಂದು ಶಾಂತವಾಗಿ ಕೇಳಿದನು.

ಜಿ. ವೆಂಕಟೇಶ

ಥಕ್ಕನೆ ಏನು ಹೇಳಲೂ ತೋರದೆ ವಲ್ಲಭನು ತಡಬಡಿಸಿ, "ಈ ಸಂಪತ್ತು ನಿಮಗೆ ಹೇಗೂ ಅಗತ್ಯ ವಿಲ್ಲದ್ದು. ಇದರಿಂದ ನಾನು ಸುಖವಾಗಿ ಬದುಕಿ ಕೊಂಡೇನು." ಎಂದನು.

"ಹಾಗಾದರೆ ನೀನು ಸುಖವಾಗಿ ಬದುಕಲಿಕ್ಕೆ ಇಷ್ಟೊಂದು ಮಾತ್ರ ಸಾಕೇನು ? ಇನ್ನೂ ಬೇಡ ವೇನು ?" ಎಂದು ದಿವ್ಯಾನಂದನು ಕೇಳಿದನು.

ವಲ್ಲಭನು ಆಶ್ಚರ್ಯ ಪಡುತ್ತ, "ಇನ್ನೂ ಇದ್ದರೆ ಬೇಕು, ಕೊಡುವಿರೇನು ?" ಎಂದು ಕೇಳಿದನು.

"ಇರುವುದನ್ನು ನಿನಗೇ ಕೊಟ್ಟರಾಯಿತು. ನಾನೇನು ಮಾಡಿಕೊಳ್ಳುತ್ತೇನೆ ? ಆದರೆ ನೀನು ನನ್ನೊಂದಿಗೆ ಸ್ವಲ್ಪಕಾಲವಿದ್ದು, ಪ್ರಜೆಗಳು ನನಗೆ ಸಮರ್ಪಿಸುವ ಕಾಣಿಕೆಗಳು ನಿನಗೆ ಸಾಕೆನಿಸಿದಾಗ ಅವುಗಳನ್ನೆಲ್ಲಾ ತೆಗೆದುಕೊಂಡು ಹೋಗಿ ಸುಖವಾಗಿರು" ಎಂದನು ದಿವ್ಯಾನಂದ.

ವಲ್ಲಭನು ಅದಕ್ಕೆ ಒಪ್ಪಿಕೊಂಡನು. ದಿಕ್ಕಿಲ್ಲದವನಿಗೆ ಎಲ್ಲಿದ್ದರೂ ಒಂದೇ. ಸುಖವಾಗಿ ದಿನಗಳೆದರಾಯಿತು. ಆ ದಿನದ ಮೊದಲುಗೊಂಡು ವಲ್ಲಭನು ದಿವ್ಯಾನಂದನೊಂದಿಗೇ ಇರುತ್ತ, ಆತ ಹೋಗುವ ಊರುಗಳಿಗೆ ಅವನ ಜತೆಯಲ್ಲೇ ಹೋಗುತ್ತ, ಅವನು ಪ್ರಜೆಗಳಿಗೆ ಮಾಡುವ ಬೋಧನೆಗಳನ್ನು ಕೇಳುತ್ತ, ಆತನಿಗೆ ಬರುವ ಕಾಣಿಕೆಗಳನ್ನು ಭದ್ರಪಡಿಸುತ್ತ ದಿನಗಳೆಯ ತೊಡಗಿದನು.

ಕೆಲವು ತಿಂಗಳು ಕಳೆಯಲು, ಒಂದು ದಿನ ದಿವ್ಯಾನಂದನು ವಲ್ಲಭನೊಂದಿಗೆ, "ಕೆಲವು ದಿನ ನಾನು ಧ್ಯಾನಸಮಾಧಿಯಲ್ಲಿರಲು ನಿಶ್ಚಯಿಸಿದ್ದೇನೆ. ನಾನು ಸಮಾಧಿಯಿಂದ ಎದ್ದು ಬರುವವರೆಗೂ ನೀನೇ ನನ್ನ ಸ್ಥಾನದಲ್ಲಿದ್ದು, ನೋಡಲು ಬಂದವರಿಗೆ ನಿನಗೆ ತಿಳಿದ ಹಾಗೆ ಜ್ಞಾನಬೋಧೆ ಮಾಡು. ನಾನು ಮಾಡುವ ಬೋಧನೆಗಳನ್ನು ನೀನು ಕೇಳಿರುವೆಯಷ್ಟೇ ? ಯಾರಾದರೂ ಸಂದೇಹಗಳನ್ನು ಕೇಳಿದರೆ ನಿನಗೆ ಸಾಧ್ಯವಾದ ರೀತಿಯಲ್ಲಿ ಸಂದೇಹವನ್ನೂ ತೀರಿಸು. ನನ್ನನ್ನು ಎಬ್ಬಿಸಬೇಡ" ಎಂದು ಹೇಳಿ, ಒಳಗೆ ಹೋಗಿ ಧ್ಯಾನ ಸಮಾಧಿಗೆ ಕುಳಿತನು.



ತರುವಾಯ ವಲ್ಲಭನು ಸಾಧುವಿನ ಸ್ಥಾನದಲ್ಲಿ ಕುಳಿತು ಪ್ರಜೆಗಳಿಗೆ ನೀತಿಬೋಧೆ ಮಾಡುವುದಕ್ಕೂ, ಅವರ ಸಂದೇಹಗಳಿಗೆ ತಕ್ಕ ಪ್ರತ್ಯುತ್ತರ ಕೊಟ್ಟು ತೃಪ್ತಿ ಪಡಿಸುವುದಕ್ಕೂ ಸಮರ್ಥನಾದನು.

ಹೀಗೆ ನಡೆಯುತ್ತಿರಲು ಒಂದು ದಿನ ಒಬ್ಬ ದೊಡ್ಡ ಕಳ್ಳ ವಲ್ಲಭನ ಮುಂದೆ ಅಡ್ಡ ಬಿದ್ದು, "ಸ್ವಾಮಿ! ನಾನು ಎಷ್ಟೋ ಕೊಳ್ಳೆ ಕೊಲೆ ಕಳ್ಳತನಗಳನ್ನೆಲ್ಲಾ ಮಾಡಿದ್ದೇನೆ. ನನ್ನ ಪಾಪಗಳು ನನ್ನ ಬೆನ್ನು ಹತ್ತಿಕೊಂಡೇ ಇರುವ ಸಂಗತಿಯನ್ನು ತಿಳಿಯದೆ ಬಹಳ ಸೊಕ್ಕಿನಿಂದಿದ್ದೆ. ಏನೂ ಅರಿಯದ ನನ್ನ ಹೆಂಡತಿಯೂ ಮಕ್ಕಳೂ, ಬಂಧುಗಳೂ ರಾಜಭಟರ ಕೈಯಲ್ಲಿ ಚಿತ್ರಹಿಂಸೆಗೆ ಗುರಿಯಾಗಿ ಪ್ರಾಣ ಕಳೆದು ಕೊಂಡರು. ಇದೆಲ್ಲಕ್ಕೂ ಕಾರಣವಾದ ಈ ಪಾಪಿಷ್ಠ ಧನ ನನಗೆ ಬೇಡ. ಇದನ್ನು ತಾವು ಸ್ವೀಕರಿಸಿ ನಿಮ್ಮ ಪುಣ್ಯ ಹಸ್ತದಿಂದಲೇ ಬಡಬಗ್ಗರಿಗೆ ಹಂಚಿ ಬಿಡಿ." ಎಂದು ಅಳುತ್ತಾ ಹೇಳಿ, ದೊಡ್ಡದೊಂದು ಮೂಟೆಯನ್ನು ಅಲ್ಲಿಟ್ಟು ಹೋಗಿಬಿಟ್ಟನು.

ಮತ್ತೊಂದು ದಿನ ಪ್ರಮುಖ ವರ್ತಕನೊಬ್ಬ ವಲ್ಲಭನ ಬಳಿಗೆ ಬಂದು ಕೈಮುಗಿದು, "ಸ್ವಾಮಿ, ನಾನೊಬ್ಬ ಪಾಪಿ. ವ್ಯಾಪಾರದಲ್ಲಿ ಮೋಸವನ್ನೂ ಅನ್ಯಾಯವನ್ನೂ ಮಾಡಿ ಬಹಳ ಹಣ ಸಂಪಾದನೆ ಮಾಡಿಬಿಟ್ಟೆ. ಆದರೆ ನನ್ನ ಜನ್ಮಕ್ಕೆ ಸುಖವೇ ಇಲ್ಲದೆ ಹೋಯಿತು. ನನ್ನ ಹೆಂಡತಿಯೂ ಮಕ್ಕಳೂ ಯಾವುದೋ ವಿಚಿತ್ರವಾದ ಕಾಯಿಲೆಯಿಂದ ನರಳುತ್ತಾ ಸಾಯುತ್ತಾ ಇದ್ದಾರೆ. ನನ್ನ ಹಣ ಅವರನ್ನು ಕಾಪಾಡಲಾರದೆ ಹೋಯಿತು. ಈ ಪಾಪದ ಹಣವನ್ನು ನೀವೇ ಪ್ರಜೆಗಳಿಗೆ ಹಂಚಿ ಕೊಟ್ಟು ನನಗೆ ಮನಃಶಾಂತಿಯನ್ನು ದಯಪಾಲಿಸಬೇಕು" ಎಂದು ಪ್ರಾರ್ಥಿಸಿದನು. ಹೀಗೆ ಆಗಾಗ ತನ್ನಬಳಿಗೆ ಪಾಪ ಮಾಡಿದವರು ಬಂದು, ತಮ್ಮ ಪಶ್ಚಾತ್ತಾಪವನ್ನು ತೋಡಿಕೊಳ್ಳುತ್ತಿರುವಾಗ, ವಲ್ಲಭನ ಮನಸ್ಸು ವಿಕಲವಾಗುತ್ತಿದ್ದಿತು. ತಾನು ಕನಸುಕಂಡ ಸುಖಭೋಗಗಳ ಮೇಲೆ ಅವನಿಗೆ ವಿರಕ್ತಿಯುಂಟಾಯಿತು. ತರುವಾಯ ದಿವ್ಯಾನಂದನು ಸಮಾಧಿಯಿಂದೆದ್ದು ಹೊರಗೆ ಬಂದನು. ಅವನು ವಲ್ಲಭನೊಂದಿಗೆ "ಅಪ್ಪಾ, ನಿನಗೆ ಬೇಕಾದಷ್ಟು ಧನವು ಜನರು ಕೊಟ್ಟ ಕಾಣಿಕೆಯ ರೂಪದಲ್ಲಿ ಬಂದಿತೇ? ಸಾಕೆ? ಇನ್ನೂ ಬೇಕೆ?" ಎಂದು ಕೇಳಿದನು.

ವಲ್ಲಭನು ಅವನ ಕಾಲಿಗೆ ಬಿದ್ದು, "ಸ್ವಾಮಿ, ಈ ತುಚ್ಛವಾದ ಹಣ ನನಗೆ ಬೇಡವೇ ಬೇಡ. ನನ್ನನ್ನು ನಿಮ್ಮೊಂದಿಗೇ ಇರಿಸಿಕೊಳ್ಳಿ ಸ್ವಾಮಿ. ಇಲ್ಲಿಯೇ ಪರಮಾನಂದವಾಗಿದೆ." ಎಂದನು.

ತರುವಾಯ ವಲ್ಲಭನು ಕಡೆತನಕವೂ ದಿವ್ಯಾನಂದನ ಜತೆಯಲ್ಲೇ ಇದ್ದು, ಕೀರ್ತಿಶಾಲಿಯಾದನು.



# ಲಂಚವೆಂದರೆ ಅದೇ !

**ಗ**ಣಪತಿಗೆ ರಾಜನ ದಿವಾಣ ಕಛೇರಿಯಲ್ಲಿ ಒಳ್ಳೆಯ ಉದ್ಯೋಗವಿದ್ದಿತು. ಮನಸ್ಸು ಮಾಡಿದರೆ ಎರಡು ಕೈಗಳಿಂದಲೂ ಸಂಪಾದಿಸಬಹುದಾಗಿತ್ತು. ಅದನ್ನು ನೋಡಿ ಶ್ರೀಮಂತನೊಬ್ಬ ತನ್ನ ಮಗಳನ್ನು ಅವನಿಗೆ ಕೊಟ್ಟು ಗದ್ದಲದಿಂದ ಮದುವೆ ಮಾಡಿ, ವರದಕ್ಷಿಣೆ ಕಾಣಿಕೆ ಎಲ್ಲಾ ಧಂಡಿಯಾಗಿ ಕೊಟ್ಟನು.

ಗಣಪತಿಯ ಹೆಂಡತಿ ಶಾರದೆ ಗಂಡನ ಮನೆಗೆ ಬಂದ ಕೂಡಲೇ, ತನ್ನ ಗಂಡನು ಲಂಚ ಪಡೆಯುವವನಲ್ಲವೆಂದು ತಿಳಿದುಕೊಂಡಳು. ಅವಳು ಎಷ್ಟು ಹೇಳಿದರೂ ಪ್ರಯೋಜನವಿಲ್ಲದೆ ಹೋಯಿತು. ಕಡೆಗೆ ಬೇಸರಗೊಂಡು ತನ್ನ ತೌರಿಗೆ ಹೊರಟು ನಿಂತಳು.

ಗಣಪತಿ ಅವಳೊಂದಿಗೆ, "ನಾನು ಲಂಚ ಪಡೆದರೆ ನೀನು ನನ್ನೊಂದಿಗೆ ಇರುವೆಯಾ ?" ಎಂದು ಕೇಳಿದ. ಇರುತ್ತೇನೆಂದಳು ಶಾರದೆ.

"ಹಾಗಾದರೆ ನೀನು ನಿನ್ನ ತೌರಿನಿಂದ ಬರುವಾಗ ನಿನ್ನ ತಂದೆ ಊಟ ಮಾಡುವ ಚಿನ್ನದ ಬಟ್ಟಲನ್ನು ತೆಗೆದುಕೊಂಡು ಬಾ" ಎಂದ ಗಣಪತಿ.

"ಏಕೆ ? ನಾನು ತಂದ ವರದಕ್ಷಿಣೆ ಕಾಣಿಕೆ ಎಲ್ಲಾ ಸಾಲದೇ ? ಆದರೂ ಇನ್ನು ಅವರೇಕೆ ಕೊಡುತ್ತಾರೆ ? ಕೇಳುವುದೇ ತಪ್ಪು" ಎಂದಳು ಶಾರದೆ.

"ಹಾಗಾದರೆ ಕದ್ದು ತಂದುಬಿಡು" ಎಂದ ಗಣಪತಿ.

"ನನ್ನ ತಂದೆಯ ಸೊತ್ತು, ನಾನು ಕದಿಯುವುದೆ ? ನಿಮಗೆ ಬುದ್ಧಿ ಕೆಟ್ಟಿತೇ ?" ಎಂದಳು ಶಾರದೆ.

"ಲಂಚವೆಂದರೆ ಅದೇ ನನಗೂ. ರಾಜರು ನನ್ನ ತಂದೆಗೆ ಸಮಾನರು. ಅವರಿಗೆ ತಿಳಿಯದಂತೆ ಲಂಚ ಪಡೆಯುವುದೂ ಕಳ್ಳತನವೇ" ಎಂದ ಗಣಪತಿ.

ಹೊರಟು ನಿಂತ ಶಾರದೆ ಮನೆಯೊಳಗೇ ಬಂದಳು.





# ದೇವರಸೊತ್ತು

ಒಂದು ಊರಿನಲ್ಲಿ ಶಿವಾಚಾರಿ ಎಂಬವನು ಏನೋ ಮಂತ್ರಗಳನ್ನು ಕಲಿತು, ಅದರಿಂದ ಹೊಟ್ಟೆ ಹೊರೆಯಲು ದೇವಾಲಯಗಳನ್ನು ಹುಡುಕುತ್ತಾ ಇನ್ನೊಂದು ಊರಿಗೆ ಬಂದನು. ಅಲ್ಲಿ ಅವರಿವರ ಕಾಲುಗಳನ್ನು ಹಿಡಿದು, ಗುಡ್ಡದ ಮೇಲಿನ ದೇವಾಲಯಕ್ಕೆ ಅರ್ಚಕನಾಗುವ ಕೆಲಸವನ್ನು ಗಿಟ್ಟಿಸಿಕೊಂಡನು. ಆದರೆ ಆ ಕೆಲಸದಿಂದ ಅವನ ದಾರಿದ್ರ್ಯಬಾಧೆ ಸ್ವಲ್ಪವೂ ತೀರಲಿಲ್ಲ. ದೇವಾಲಯಕ್ಕೆ ಬರುವ ಭಕ್ತರು ದೇವರಿಗೆ ತಾವು ಅರ್ಪಿಸುವ ಕಾಣಿಕೆಯನ್ನು ಭೂಗರ್ಭದಲ್ಲಿ ಹುಗಿಯಲ್ಪಟ್ಟ ಹುಂಡಿಯೊಳಗೆ ಹಾಕಿ ಹೊರಟು ಹೋಗುತ್ತಿದ್ದರು. ಅರ್ಚಕನಿಗೆ ತಿಂಗಳ ಸಂಬಳದ ಹೊರತು ಮತ್ತೇನೂ ಸಿಗುತ್ತಿದ್ದಿಲ್ಲ.

ಗುಡ್ಡದ ಮೇಲಿನ ಗುಡಿಯ ಹುಂಡಿಯಲ್ಲಿ ಅಷ್ಟೊಂದು ಹಣ ನರಳುತ್ತ ಬಿದ್ದಿರುವಾಗ ತಾನು ಹಣದ ಮುಗ್ಗಟ್ಟಿನಿಂದ ಸಾಯುವುದೆಂದರೆ ಶಿವಾಚಾರಿಗೆ ಹಿಡಿಸಲಿಲ್ಲ. ಅದನ್ನು ತಾನು ತನ್ನ ಅಡಚಣೆಗೆ ಉಪಯೋಗಿಸಬೇಕಾದ್ದೇ ಸರಿಯೆಂದು ತೋರಿತು. ಒಂದು ದಿನ ರಾತ್ರಿ ಅವನು ಅಗತ್ಯವಾದ ಕೆಲವು ಉಪಕರಣಗಳನ್ನು ತೆಗೆದುಕೊಂಡು, ಹುಂಡಿಯ ಬೀಗವನ್ನು ಉಪಾಯದಿಂದ ತೆಗೆದು, ಅದರೊಳಗೆ ಹೊಳೆಯುತ್ತಿದ್ದ ನಗನಾಣ್ಯಗಳನ್ನು ಬಹಳಷ್ಟು ತೆಗೆದು ಗಂಟು ಕಟ್ಟಿ ಮತ್ತೆ ಮೊದಲಿನಂತೆಯೇ ಬೀಗ ಹಾಕಿ, ಗುಡ್ಡ ಇಳಿದು ಬಂದು, ತನ್ನ ಬಿಡಾರದ ಹಿಂದೆ ಒಂದು ಗುರುತಿನ ಕಡೆಯಲ್ಲಿ ಹುಗಿದಿಟ್ಟುಬಿಟ್ಟನು. ತನಗೆ ಆ ಸ್ಥಳವು ಮರೆತು ಹೋಗಬಾರದೆಂದು ಒಂದು ಕಾಗದದಲ್ಲಿ ಹುಗಿದಿಟ್ಟ ಸ್ಥಳದ ವಿವರಗಳನ್ನೂ ಬರೆದು ಆ ಕಾಗದವನ್ನು ತನ್ನ ಮನೆಯ ಗೂಡಿನಲ್ಲಿರುವ ಶಿವನ ವಿಗ್ರಹದ ಕೆಳಗೆ ಮಡಚಿಟ್ಟನು.

ಇದಾದ ಎರಡು ದಿನಗಳ ಮೇಲೆ ರಾತ್ರಿಯಲ್ಲಿ ಶಿವಾಚಾರಿ ನಿದ್ರೆಬಾರದೆ ಹೊರಳಾಡಿಕೊಂಡಿದ್ದನು. ಆಗ ಮನೆಯ ಹಿಂದೆ ಯಾರೋ ಹಾರಿದ ಶಬ್ದ ಕೇಳಿತು. ಅವನು ತಟಕ್ಕನೆದ್ದು ಹಿಂಬದಿಯ ಬಾಗಿಲು ತೆರೆದು ನೋಡಿದನು. ಯಾರ ಸುಳಿವೂ ಕಾಣಲಿಲ್ಲ.

ಶಿವಾಚಾರಿ ದಿಕ್ಕುಗಳನ್ನು ಪರೀಕ್ಷಿಸಿಕೊಂಡಿದ್ದಾಗ, ಅವನ ಹಿಂದಿನಿಂದ ಯಾರೋ ಮಿಂಚಿನಂತೆ ತೂರಿ ಹೋಗಿ ದಢಕ್ಕನೆ ಗೋಡೆ ಹಾರಿ ಅದೃಶ್ಯನಾದನು.

ಆಗ ಹೆದರಿದ ಶಿವಾಚಾರಿಗೆ ಕೆಟ್ಟದೊಂದು ಸಂದೇಹ ಬಂತು. ತಾನು ಹುಗಿದಿಟ್ಟ ನಿಧಿಯ

ಪಿ. ಜಯರಾಂ

ಗುಟ್ಟನ್ನು ಯಾವ ಕಳ್ಳನೋ ಕಂಡುಹಿಡಿದನೇನೋ? ಅವನು ತಾನು ಹುಗಿದಿಟ್ಟ ಸ್ಥಳಕ್ಕೆ ಹೋಗಲು ಎರಡಡಿಗಳನ್ನು ತೆಗೆದಿಟ್ಟನಷ್ಟೇ, ಅಷ್ಟರಲ್ಲಿ ರಾಜ ಭಟರು ಬಂದು ಅವನನ್ನು ಹಿಡಿದರು. ಇದೀಗ ಗೋಡೆ ಹಾರಿ ಓಡಿದ ಕಳ್ಳನ ಬೆನ್ನಟ್ಟಿಯೇ ಇವರು ಬಂದವರೆಂದುಕೊಂಡು ಶಿವಾಚಾರಿ, "ಈಗತಾನೇ ಕಳ್ಳ ಹಾಗೆ ಓಡಿದ!" ಎಂದನು.

"ನೀನಲ್ಲದೆ ಇನ್ನಾವ ಕಳ್ಳ? ನಮ್ಮ ಕಣ್ಣಿಗೆ ಖಾರ ಹಾಕಿ ಓಡಿ ಬಂದು ಇಲ್ಲಿ ತೂರಿದೆಯಾ? ಕದ್ದದ್ದನ್ನು ಎಲ್ಲಿ ಅಡಗಿಸಿದೆ ಹೇಳು" ಎಂದು ಭಟರು ಜೋರು ಮಾಡಿದರು. ಅಲ್ಲೆಲ್ಲಾ ಹುಡುಕಾಡಿದಾಗ, ಒಂದು ಪೊದರಿನಲ್ಲಿ ಕಳ್ಳತನದ ವಸ್ತುಗಳು ಸಿಕ್ಕಿದುವು. ಅವರು ಶಿವಾಚಾರಿಯನ್ನು ಹಿಡಿದುಕೊಂಡು ಹೋದರು. ಮಾಡದ ಕಳ್ಳತನಕ್ಕಾಗಿ ಶಿವಾಚಾರಿಗೆ ದಂಡನೆಯೂ ಸಿಕ್ಕಿತು.

ತಪ್ಪಿಸಿಕೊಂಡು ಓಡಿದ ಕಳ್ಳನ ಹೆಸರು ಶಂಭುದಾಸ. ಅವನು ಮರುದಿನ ರಾತ್ರಿ ಶಿವಾಚಾರಿಯ ಮನೆಗೇ ಸಿಕ್ಕಿದ್ದು ಕದಿಯೋಣವೆಂದು ಬಂದ. ಮನೆಯೊಳಗೆ ಯಾರೂ ಇಲ್ಲವೆಂದು ಅವನಿಗೆ ಗೊತ್ತಿತ್ತು. ಆದರೆ ಆ ಬಡ ಮನೆಯಲ್ಲಿ ಅವನಿಗೇನೂ ಸಿಗಲಿಲ್ಲ. ಗೂಡಿನಲ್ಲಿ ಶಿವನ ವಿಗ್ರಹವು ಹೊಳೆಯುವುದನ್ನು ನೋಡಿದನು. ಬೆಳ್ಳಿಯದಿರಬಹುದೆಂದು ಶಂಭುದಾಸನು ಅದನ್ನು ತೆಗೆದುಕೊಂಡನು. ಆಗ ಅದರ ಕೆಳಗಿದ್ದ ಕಾಗದದ ಮಡಿಕೆ ಕೆಳಗೆ ಬಿತ್ತು. ಅದರಲ್ಲಿಯೇ ನಿಧಿ ಹುಗಿದಿಟ್ಟ ಸ್ಥಳದ ವಿವರಗಳಿದ್ದುವಷ್ಟೆ? ಅವನಿಗೆ ಓದಲು ಬರುತಿತ್ತು. "ಇಲ್ಲಿ ಹುಗಿಯಲ್ಪಟ್ಟಿದೆ" ಎಂದಿರುವುದನ್ನು ನೋಡಿ, ಕುತೂಹಲದಿಂದ ಎಲ್ಲವನ್ನೂ ಓದಿದನು. ಒಂದು ಗಂಟು ಹೋದರೆ, ಇನ್ನೊಂದು ಗಂಟು ಸಿಗುವುದೆಂದು ಅತ್ಯಾನಂದಗೊಂಡು, ಕಾಗದದಲ್ಲಿದ್ದ ಗುರುತುಗಳನ್ನು ಹಿಡಿದು, ಮನೆ ಹಿಂದೆ ಹುಗಿದಿಟ್ಟ ನಗಗಳ ಮೂಟೆಯನ್ನು ಅಗೆದು ಎತ್ತಿಕೊಂಡನು. ತನ್ನ ಬಟ್ಟೆಯನ್ನೇ ಜೋಳಿಗೆಯ ಹಾಗೆ ಮಾಡಿಕೊಂಡು, ಅದರೊಳಗೆ ಆ ಮೂಟೆಯನ್ನಿಟ್ಟು ಅಲ್ಲಿಂದ ಹೊರಟನು.



ದಾರಿಯಲ್ಲಿ ಒಂದು ಕಡೆ ಬಚ್ಚಿಟ್ಟಿದ್ದ ಕೆಲವು ಸಜ್ಜೆ ರೊಟ್ಟಿಗಳನ್ನೂ ಆ ಜೋಳಿಗೆಯೊಳಗೇ ಹಾಕಿದನು. ಆಮೇಲೆ ಸತ್ರಕ್ಕೆ ಹೋಗಿ ಅದರ ಜಗಲಿಯಲ್ಲಿ ಕುಳಿತನು. ಅಲ್ಲಿ ಯಾವನೋ ಒಬ್ಬ ಬೈರಾಗಿಯ ಹೊರತು ಬೇರೆ ಯಾರೂ ಇರಲಿಲ್ಲ.

ಶಂಭುದಾಸನು ಸಜ್ಜೆರೊಟ್ಟಿ ತಿಂದು ಹಸಿವೆ ಅಡಗಿದ ಮೇಲೆ, ಉಳಿದುದನ್ನು ಜೋಳಿಗೆಯೊಳಗೇ ಇಟ್ಟು, ಆ ಜೋಳಿಗೆಯನ್ನು ತಲೆಬುಡದಲ್ಲಿಟ್ಟುಕೊಂಡು ಮಲಗಿ ನಿದ್ದೆಗೆ ಇಳಿದನು.

ಅವನನ್ನು ಒಂದು ಕಣ್ಣಿನಲ್ಲಿ ಪರೀಕ್ಷಿಸಿಕೊಂಡೇ ಇದ್ದ ಬೈರಾಗಿ, ಅವನಿಗೆ ನಿದ್ದೆ ಬಂದ ಕೂಡಲೇ, ಉಳಿದ ಸಜ್ಜೆರೊಟ್ಟಿಗಳಿಗಾಗಿ ಜೋಳಿಗೆಯನ್ನು ವಶಪಡಿಸಿಕೊಳ್ಳಲು ಮುಂದಾದನು. ಅವನು ತನ್ನ ಚೀಲದೊಳಗಿನಿಂದ ಯಾವುದೋ ಒಂದು ತೈಲವನ್ನು ತೆಗೆದು ಶಂಭುದಾಸನ ಮೂಗಿನ ಹತ್ತಿರವಿಟ್ಟು ಅವನಿಗೆ ಸ್ಪೃಹೆ ತಪ್ಪಿಸಿಬಿಟ್ಟನು. ಆಮೇಲೆ ಅವನ ಜೋಳಿಗೆಯನ್ನೆತ್ತಿಕೊಂಡು ಅದರದಲ್ಲಿದ್ದ ರೊಟ್ಟಿಗಳನ್ನು ತಿನ್ನುತ್ತ, ನಗಗಳ ಮೂಟೆ ಕಂಡನು.

ಅವನೂ ನಿಜ ಬೈರಾಗಿಯಲ್ಲ, ಬೈರಾಗಿ ವೇಷದಲ್ಲಿದ್ದ ಕಳ್ಳನೇ. ಅವನ ಹೆಸರು ಲಿಂಗಸ್ವಾಮಿ. ಅವನು ತನ್ನ ಬೈರಾಗೀ ವೇಷವನ್ನು ತೆಗೆದು ಹಾಕಿ ಆ ಮೂಟೆಯಲ್ಲಿಯ ನಗಗಳೊಂದಿಗೆ ಎತ್ತಾದರೂ ಓಡಿ ಹೋಗಬೇಕೆಂದು ಆಲೋಚಿಸುವಾಗ, ಗುಡ್ಡದ ದೇವಾಲಯವು ಕಂಡು ಬಂತು. ಅವನು ಕೂಡಲೇ ನಿರ್ಮಾನುಷ್ಯವಾಗಿರುವ ಆ ದೇವಾಲಯದ ಹುಂಡಿಗೆ ಒಂದು ರೂಪಾಯಿ ಹಾಕಿ ಹೋಗಿಬಿಡೋಣವೆಂದುಕೊಂಡು ಅಲ್ಲಿಗೇ ಹೋಗಿದ್ದನು.

ಆಗ ಉಷಃಕಾಲದ ಸಮಯ. ಲಿಂಗಸ್ವಾಮಿ ತನ್ನ ವೇಷ ಬದಲಾಯಿಸಿಕೊಳ್ಳುತ್ತಾ ಗುಡಿಯ ಮೂಲೆಯಲ್ಲಿದ್ದನು. ಅಷ್ಟು ಹೊತ್ತಿಗೆ ಆ ಗುಡಿಯ ಧರ್ಮಕರ್ತನೂ, ಕೆಲಮಂದಿ ಆಳುಗಳೂ ಅಲ್ಲಿಗೆ ಬಂದರು. ವರ್ಷಕ್ಕೊಮ್ಮೆ ದೇವರ ಹುಂಡೀ ತೆರೆಯುವಂತೆ ಆ ದಿನ ಹುಂಡೀ ತೆರೆಯುವ ದಿನವಾಗಿತ್ತು. ಧರ್ಮಕರ್ತ ಹುಂಡೀ ತೆರೆದು ನೋಡಿದರೆ ಒಳಗೆ ತುಂಬಾ ಖಾಲಿಯಾಗಿರುವುದನ್ನು ಕಂಡು ಆಶ್ಚರ್ಯವಾಯಿತು. ಕೃತ್ರಿಮ ಗಡ್ಡ ಮೀಸೆಯನ್ನು ಕಳಚಿಟ್ಟು ಮೂಲೆಯಲ್ಲಿ ಓಡಲೋ ಬಿಡಲೋ ಎಂಬಂತಿದ್ದ ಲಿಂಗಸ್ವಾಮಿಯನ್ನು ಆಳುಗಳು ಕೂಡಲೇ ಹಿಡಿದರು. ದೇವರ ಸೊತ್ತಿನೊಂದಿಗೆ ಅವನು ಸಿಕ್ಕಿಬಿದ್ದು ಕೆಲವು ಪೆಟ್ಟುಗಳನ್ನೂ ತಿಂದನು. ಆಮೇಲೆ ಅವನನ್ನು ಕೋತ್ವಾಲನ ವಶಕ್ಕೆ ಒಪ್ಪಿಸಿದರು.

ದೇವರ ಸೊತ್ತಿನ ಕಾರಣದಿಂದಾಗಿ ಇಬ್ಬರು ಕಳ್ಳರು ಸೆರೆಮನೆಗೆ ಬಿದ್ದರೂ, ಆ ಸೊತ್ತು ದೇವರ ಹುಂಡಿಗೇ ಬಂದು ಸೇರಿತು.



# ಜೀವದ ಬೊಂಬೆ

**ಒ**ಬ್ಬ ಬಡವನಿಗೆ ಇಬ್ಬರು ಹೆಣ್ಣು ಮಕ್ಕಳಿದ್ದರು. ಮಕ್ಕಳ ತಾಯಿ ಬಾಲ್ಯದಲ್ಲೇ ತೀರಿಹೋಗಿದ್ದಳು. ತಂದೆಯೇ ಮಕ್ಕಳನ್ನು ಪೋಷಿಸಿ ಬೆಳೆಸಿದನು.

ಒಂದು ದಿನ ಚಿಕ್ಕವಳು ಬಟ್ಟೆಯಿಂದ ಒಂದು ಬೊಂಬೆ ಮಾಡಿ, ಅಕ್ಕನಿಗೆ ತೋರಿಸುತ್ತ "ನೀನೂ ಸಹಾ ಒಂದು ಬೊಂಬೆ ಮಾಡು. ಇಬ್ಬರಿಗೂ ಮದುವೇ ಮಾಡುವಾ" ಎಂದಳು.

ಆದರೆ ಅಕ್ಕನಿಂದ ಬೊಂಬೆ ಮಾಡಲು ಕೈಲಾಗಲಿಲ್ಲ. ಅವಳು ತಂಗಿಯ ಬೊಂಬೆಯನ್ನು ಎಳೆದು ಕೊಂಡು ಹಿಂದಿರುಗಿ ಕೊಡಲಿಲ್ಲ. ತಂಗಿ ಅಳತೊಡಗಿದಳು. ಆಗ ತಂದೆ, "ಅಳಬೇಡಮ್ಮಾ ! ಅಕ್ಕ ಕಲಿತು ಬೊಂಬೆ ಮಾಡಿ ಕೊಡುತ್ತಾಳೆ. ನಾನೇ ನಿನಗೆ ಕೊಡಿಸುತ್ತೇನೆ" ಎಂದು ಹೇಳಿ ಸಮಾಧಾನಪಡಿಸಿದನು.

ತರುವಾಯ ಕೆಲವು ದರ್ಷಗಳ ಮೇಲೆ ದೊಡ್ಡವಳಿಗೆ ಮದುವೆಯಾಯಿತು. ಮೂರನೇ ವರ್ಷ ಅವಳು ಒಂದು ಹೆಣ್ಣು ಮಗುವನ್ನೂ ಹೆತ್ತಳು. ಮಗುವನ್ನು ನೋಡಲು ಅವಳ ತಂದೆಯೂ, ತಂಗಿಯೂ ಹೋದರು. ದೊಡ್ಡವಳು ಮಗುವನ್ನು ಹೆತ್ತ ಮೇಲೆ, ಏನೋ ಸನ್ನಿಬಡೆದು ಸಾಯುವ ಸ್ಥಿತಿಯಲ್ಲಿದ್ದಳು. ಅವಳು ತಂಗಿಯ ಕೈಗೆ ತನ್ನ ಮಗುವನ್ನು—ಜೀವವಿರುವ ಬೊಂಬೆಯನ್ನು ಕೊಟ್ಟು ಕಣ್ಣು ಮುಚ್ಚಿದಳು.





# ಗರ್ವಕರಗಿತು

ರವೀಂದ್ರನು ಗ್ರಾಮದಲ್ಲಿ ಹುಟ್ಟಿದವನಾದರೂ ವಿದ್ಯೆಕಲಿತವನಾದುದರಿಂದ, ಗ್ರಾಮದಲ್ಲಿ ಒದ್ದಾಡಿಕೊಂಡಿರಲು ಇಷ್ಟವಿಲ್ಲದೆ, ಏನಾದರೂ ಗೌರವದ ಕೆಲಸವನ್ನು ಸಂಪಾದಿಸಲು ರಾಜಧಾನೀ ನಗರಕ್ಕೆ ಹೊರಟನು. ರಾತ್ರಿಯಲ್ಲಿ ತಂಗಲು ಎಲ್ಲಿ ಸೌಕರ್ಯವಾಗಿರುತ್ತದೆಂದು ಒಬ್ಬ ದೊಡ್ಡ ಮನುಷ್ಯನನ್ನು ಕೇಳಿದನು. ಆ ದೊಡ್ಡ ಮನುಷ್ಯ ರವೀಂದ್ರನ ಪೂರ್ವಾಪರ ವೃತ್ತಾಂತವನ್ನೆಲ್ಲಾ ವಿಚಾರಿಸಿ, ತನ್ನ ಮನೆಗೇ ಕರೆದುಕೊಂಡುಹೋದನು. ಅಲ್ಲಿ ಅವನಿಗೆ ಅತಿಥಿ ಮರ್ಯಾದೆಗಳೆಲ್ಲಾ ಚೆನ್ನಾಗಿ ನಡೆದುವು.

ಊಟದ ಹೊತ್ತಿನಲ್ಲಿ ಆ ದೊಡ್ಡ ಮನುಷ್ಯನೂ ರವೀಂದ್ರನೂ ಒಟ್ಟಿಗೇ ಕುಳಿತಿದ್ದರು. ಅವರಿಬ್ಬರಿಗೂ ಒಬ್ಬಳು ಹುಡುಗಿ ಬಡಿಸಿದ್ದಳು. ಊಟ ಮುಗಿದ ಮೇಲೆ ಇಬ್ಬರೂ ವಿಶ್ರಾಂತಿಯಾಗಿ ಕುಳಿತು ಲೋಕಾಭಿರಾಮವಾಗಿ ಮಾತಾಡುತ್ತಿದ್ದಾಗ, ದೊಡ್ಡ ಮನುಷ್ಯನು ರವೀಂದ್ರನೊಂದಿಗೆ, "ನಮಗೆ ಬಡಿಸಿದಳಲ್ಲಾ, ಆ ಹುಡುಗಿ ನನ್ನ ತಮ್ಮನ ಮಗಳು. ಹೆಸರು ಮಾಣಿಕ್ಯ. ನನ್ನ ತಮ್ಮನು ಮಹಾರಾಜರ ದಿವಾಣದ ಕಛೇರಿಯಲ್ಲಿ ಕೆಲಸ ಮಾಡಿಕೊಂಡಿದ್ದನು. ಒಂದು ದಿನ ಅವನು ದಿವಾಣಕ್ಕೆ ಹೋಗುತ್ತಿದ್ದಾಗ ಗೂಳಿಯೊಂದು ತಿವಿದು ಕೊಂದುಬಿಟ್ಟಿತು. ಅವನಿಗೆ ಒಬ್ಬಳೇ ಮಗಳು ಹೊರತು ಬೇರೆ ಗಂಡು ಮಕ್ಕಳಿಲ್ಲ. ಅವನ ಉದ್ಯೋಗವನ್ನು ಅವನ ಅಳಿಯನಿಗೆ ಕೊಡುವುದಾಗಿ ಮಹಾರಾಜರು ಮಾತು ಕೊಟ್ಟಿದ್ದಾರೆ. ನಿನಗೆ ಇಷ್ಟವಿದ್ದರೆ ಮಾಣಿಕ್ಯಳನ್ನು ಮದುವೆ ಮಾಡಿಕೊಂಡು ದಿವಾಣ ಕಛೇರಿಯಲ್ಲಿ ಉದ್ಯೋಗಕ್ಕೂ ಸೇರಬಹುದು" ಎಂದನು.

ರವೀಂದ್ರನು ಆಲೋಚನೆ ಮಾಡಿದನು. ತನಗೆ ಪ್ರಸ್ತುತ ಉದ್ಯೋಗವು ಮುಖ್ಯವಾದರೂ ಆಮೇಲೆ ಮದುವೆಯೂ ಆಗಲೇ ಬೇಕಿತ್ತು. ಮಾಣಿಕ್ಯಳು ಸುರೂಪಿಯೂ ಹೌದು. ಈಗ ಮಾಣಿಕ್ಯಳನ್ನು ಮಾಡಿಕೊಳ್ಳುವುದರಿಂದ ಶ್ರಮವಿಲ್ಲದೆ ಉದ್ಯೋಗವೂ ಸಿಗುತ್ತದೆ. ಅಂತಲೇ ಅವನು ಮರುದಿನ ಬೆಳಗಾದ ಮೇಲೆ, ಮಾಣಿಕ್ಯಳನ್ನು ಮದುವೆ ಮಾಡಿಕೊಳ್ಳಲು ತನ್ನ ಒಪ್ಪಿಗೆ ತಿಳಿಸಿದನು. ಮತ್ತೆ ಒಂದು ವಾರದೊಳಗೇ ಮಾಣಿಕ್ಯಳ ಜತೆಯಲ್ಲಿ ಅವನ ಮದುವೆಯೂ ಆಯಿತು. ದಿವಾಣದಲ್ಲಿ ಉದ್ಯೋಗವೂ ದೊರಕಿತು. ಆಮೇಲೆ ಬೇಗದಲ್ಲೇ ರವೀಂದ್ರನಿಗೆ ಮಾಣಿಕ್ಯಳ

ಎಂ. ಕೆ. ಈಶ್ವರರಾವ್

ನಿಜಗುಣ ಬಯಲಾಗತೊಡಗಿತು. ಅವಳ ಗರ್ವವೂ ಅಹಂಕಾರವೂ ಮೆಲ್ಲಮೆಲ್ಲ ಹೊರಗಾಗತೊಡಗಿದುವು, ತನ್ನಿಂದಲೇ ಗಂಡನಿಗೆ ಉದ್ಯೋಗ ದೊರಕಿತೆಂದು ಗಂಡನನ್ನು ಸಣ್ಣ ದೃಷ್ಟಿಯಿಂದಲೇ ನೋಡುತ್ತಿದ್ದಳು. "ನನ್ನನ್ನು ಮಾಡಿಕೊಳ್ಳದಿರುತ್ತಿದ್ದರೆ ಇವರಿಗೆ ಇಷ್ಟು ಒಳ್ಳೆಯ ಉದ್ಯೋಗ ಸಿಕ್ಕಿರುತ್ತಿತ್ತೆ? ಎಷ್ಟು ತಿಪ್ಪರಲಾಗ ಹೊಡೆಯಬೇಕಿತ್ತೋ!" ಎಂದು ಅವಳು ಅಕ್ಕಪಕ್ಕದವರೊಂದಿಗೆ ಹೆಮ್ಮೆ ಹೇಳಿಕೊಳ್ಳುತ್ತಿದ್ದಳು.

ಇದನ್ನೆಲ್ಲಾ ನೋಡಿ ರವೀಂದ್ರನು ನೊಂದುಕೊಂಡರೂ ತುಟಿ ತೆಗೆದು ಒಂದು ಮಾತು ಆಕ್ಷೇಪಿಸಲಿಲ್ಲ. ಈ ತಾಳ್ಮೆ ಮಾಣಿಕ್ಯಳ ಸ್ವತಂತ್ರ ಭಾವನೆಗೆ ಇನ್ನಿಷ್ಟು ಬಲವನ್ನೇ ಕೊಟ್ಟಿತು.

ಮಾಣಿಕ್ಯಳ ಕಡೆಯ ಬಂಧುಬಳಗದವರು ವೈದ್ಯಕ್ಕೋ ವ್ಯಾಜ್ಯಕ್ಕೋ, ಮತ್ತೇನೋ ವ್ಯವಹಾರಕ್ಕಾಗಿಯೋ ರಾಜಧಾನಿಗೆ ಬಂದಾಗಲೆಲ್ಲಾ ರವೀಂದ್ರನ ಮನೆಯಲ್ಲೇ ಉಳಿದುಕೊಳ್ಳುವರು. ಬಂದವರು ಬೇಗನೇ ಹೋಗುವುದೂ ಇಲ್ಲ. ಹೋಗುತ್ತೇವೆಂದರೂ ಮಾಣಿಕ್ಯಳು ಬಲವಂತದಿಂದ ಇರಿಸಿಕೊಳ್ಳುವಳು. ಅವರಿಗೆ ಬೇಕಾದಂತೆ ಉಪಚರಿಸುವಳು. ರವೀಂದ್ರನು ಅದನ್ನೂ ಸಹಿಸಿಕೊಳ್ಳುತ್ತಿದ್ದನು.

ಮಾಣಿಕ್ಯಳ ದೂರದ ಬಂಧುವರಿಸೆಯಲ್ಲಿದ್ದ ಸೋದರತ್ತೆಯೊಬ್ಬಳು ವಿತಂತು. ಅವಳು ಮಾಣಿಕ್ಯಳನ್ನು ನೋಡುವ ನೆಪದಲ್ಲಿ ನಾಲ್ಕು ಮಕ್ಕಳೊಂದಿಗೆ ರವೀಂದ್ರನ ಮನೆಗೆ ಬಂದು, ಅಲ್ಲಿಯೇ ಗಟ್ಟಿಯಾಗಿ ಬೇರೂರತೊಡಗಿದ್ದಳು. ವಾಚಾಳಿಯಾದ ಅವಳು ಕಾಲಕ್ಷೇಪಕ್ಕಾಗಿ ಗಂಡ ಹೆಂಡಿರ ನಡುವೆ ಸಣ್ಣಪುಟ್ಟ ಜಗಳ ಎಬ್ಬಿಸಿ ತಮಾಷೆ ನೋಡುವಳು.

ಒಂದು ದಿನ ರವೀಂದ್ರನು ಹೆಂಡತಿಯೊಡನೆ "ನಿನ್ನ ಆ ಅತ್ತೆಗೆ ಮನೆ ಬಾಗಿಲು ಅಂತ ಉಂಟೋ ಇಲ್ಲವೋ?" ಎಂದು ಕೇಳಿದನು. ಇಷ್ಟೊಂದು ಕೇಳಿದ ಕೂಡಲೇ ಮಾಣಿಕ್ಯಳು ಅತಿರುಷ್ಟ



ಳಾಗಿ, "ನಿಮಗೆ ಯಾವುದೂ ಇಲ್ಲಾಂತಾದರೆ ನನ್ನತ್ತೆಗೂ ಇಲ್ಲಾಂತ ಮಾಡಿದಿರೇನು? ನನಗೆ ಬಂಧು ಬಳಗದವರು ತುಂಬಾ ಇದ್ದಾರೆ. ಅವರು ಬಂದು ತಿನ್ನುವುದನ್ನು ನೋಡಿ ನಿಮಗೆ ಹೊಟ್ಟೆ ಉರಿಯೋದು ನನಗ್ಗೊತ್ತಿಲ್ಲಾಂತ ಮಾಡಬೇಡಿ. ಯಾಕೆ ನಿಮಗೆ ಹೊಟ್ಟೆ ಉರಿ? ನಿಮ್ಮದೇನು ಗಂಟುಹೋಯಿತು? ಅತ್ತೆ ಇಲ್ಲಿ ಎಷ್ಟು ದಿನವಿದ್ದರೂ ನನ್ನ ಇಷ್ಟ. ನನ್ನ ದೆಸೆಯಿಂದಲೇ ಈ ಮನೆ ನಡಿಯೋದೂ ಅಂತ ಮರೀಬೇಡಿ." ಎಂದಳು ಬಡಬಡನೆ.

ರವೀಂದ್ರನು ಮಾತಾಡಲೇ ಇಲ್ಲ. ಎರಡು ದಿನಗಳ ಅನಂತರ ಅವನು ಕಛೇರಿಗೆ ಹೋಗದೆ ಮನೆಯಲ್ಲೇ ಇರತೊಡಗಿದನು. "ಏಕೆ ಕೆಲಸಕ್ಕೆ ಹೋಗಿಲ್ಲ?" ಎಂದು ಮಾಣಿಕ್ಯಳು ಕೇಳಿದಳು.

"ಇನ್ನೆಲ್ಲಿಯ ಕೆಲಸ? ಎಲ್ಲಿಯ ಉದ್ಯೋಗ? ಸಂಬಳದ ಹಣ ಈ ಧರ್ಮಸತ್ರವನ್ನು ನಡೆಸಲು ಸಾಲದೆ ಲಂಚಗಿಂಚಾ ಅಂತ ತುಂಬಾ ಮಾಡಿ ಸಿಕ್ಕಿ

ಬಿದ್ದೆ. ಉದ್ಯೋಗದಿಂದ ಕಿತ್ತು ಹಾಕಿಬಿಟ್ರು. ಇನ್ನೇನು ಶಿಕ್ಷೆ ಕಾದಿದೆಯೋ? ದೇವರೇ ಗತಿ!" ಎಂದ ಹೀನ ಸ್ವರದಿಂದ ರವೀಂದ್ರ.

ಮಾಣಿಕ್ಯಳು ಗಾಬರಿಯಾದಳು. ತಲೆ ಚಚ್ಚಿಕೊಂಡು ರೋದಿಸಿದಳು. ಬಾಯಿ ನೋಯುವವರೆಗೂ ಗಂಡನನ್ನು ಬೈದಳು. ನಾಲ್ಕು ದಿನಗಳಲ್ಲಿ ಮನೆಯಲ್ಲಿದ್ದ ಹಣವೆಲ್ಲಾ ಮುಗಿದುಹೋಯಿತು. ಸೋದರತ್ತೆಯ ಹತ್ತಿರ ಹಣವಿರುವುದನ್ನು ಅವಳು ನೋಡಿದ್ದಳು. ಆದ್ದರಿಂದ ಮನೆ ಖರ್ಚಿಗೆ ಸ್ವಲ್ಪ ಹಣ ಕೈಗಡ ಕೊಡುವಂತೆ ಅತ್ತೆಯನ್ನು ಕೇಳಿದಳು.

ಕೂಡಲೇ ಆ ಹೆಂಗುಸು ಮಕ್ಕಳನ್ನು ಕರೆದು ಗಂಟುಮೂಟೆ ಕಟ್ಟಿಕೊಂಡು, "ಇದು ಇನ್ನೂ ಚೆನ್ನಾಗಿದೆಲ್ಲಾ? ಕೆಲಸಾ ಬೊಗಸೇ ಇಲ್ಲದೆ ಮನೆ ಹಿಡಿದು ಕೂತವರಿಗೆ ಕುತ್ತಿಗೇ ಮೇಲೆ ತಲೆ ಇದ್ದವರಾರಾದರೂ ಕಡ ಕೊಡೋದುಂಟೆ? ಆದ್ರೂನೂ ದಾರೀ ಖರ್ಚಿಗೇ ಅಂತ ಇರುವ ಹಣ ನಾನು ಹೇಗೆ ಕೊಡಲಿ?" ಎಂದು ಹೇಳಿ ತನ್ನ ಊರಿಗೆ ಹೊರಟು ಹೋದಳು. ಅತ್ತೆಯ ಬಂಧು ಪ್ರೇಮವು ಮಾಣಿಕ್ಯಳಿಗೆ ಅರ್ಥವಾಯಿತು. ಆ ಕೃತಘ್ನಳನ್ನು ಬೆನ್ನಿಗೆ ಹಾಕಿಕೊಂಡು ಗಂಡನನ್ನು ತುಂಬಾ ನೋಯಿಸಿದೆನಲ್ಲಾ ಎಂದುಕೊಂಡಳು. ಅತ್ತೆಯ ಹಾಗೂ ಅವಳ ಮಕ್ಕಳ ಇಷ್ಟಗಳಂತೆ ಉಪಚಾರ ಮಾಡಲು, ಗಂಡನು ಹಣ ಸಾಲದೆ ಲಂಚ ಪಡೆದು ಸಿಕ್ಕಿಬಿದ್ದು ಮನೆ ಹಿಡಿದು ಕೂರಬೇಕಾಯಿತು. ಕಡೆಗೆ ಅತ್ತೆ ಇಲ್ಲಿಯ ಕಷ್ಟವನ್ನು ಲಕ್ಷ್ಯಮಾಡದೆ ನಿಂದಿಸಿ ಹೊರಟು ಹೋಗಿದ್ದಾಳೆ. ಉಪಚಾರ ಮಾಡುತ್ತಿದ್ದರೆ ಇನ್ನೂ ಇರುತ್ತಿದ್ದಳು. ಹೀಗೆ ಯೋಚಿಸುತ್ತಾ ಮಾಣಿಕ್ಯಳು ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಆಗ ರವೀಂದ್ರನು ಅವಳನ್ನು ಸಮಾಧಾನ ಪಡಿಸುತ್ತ, "ಅಳಬೇಡ ಬಿಡು, ನನ್ನ ಉದ್ಯೋಗಕ್ಕೆ ಯಾವ ಧಕ್ಕೆಯೂ ಬರಲಿಲ್ಲ. ಸುಮ್ಮನೆ ರಜೆ ತೆಗೆದುಕೊಂಡಿದ್ದೆ ಅಷ್ಟೇ. ಮನುಷ್ಯರ ಸ್ವಭಾವ ನಿನಗೆ ಗೊತ್ತಾಗಲಿಕ್ಕಾಗಿಯೇ ಹೀಗೆ ಮಾಡಿದೆ. ನಮ್ಮ ಬಂಧು ಬಳಗದವರಲ್ಲಿ ನಿಜವಾದ ಆಪ್ತರಾರೆಂಬುದನ್ನು ನಾವು ಸೂಕ್ಷ್ಮ ದೃಷ್ಟಿಯಿಂದ ನೋಡಬೇಕಾಗುತ್ತೆ. ಅಂಥವರು ಸುಮ್ಮನೆ ಇನ್ನೊಬ್ಬರ ಮನೆಯಲ್ಲಿರಲಾರರು. ಗಂಡಹೆಂಡಿರು ಪರಸ್ಪರ ಅರ್ಥ ಮಾಡಿಕೊಂಡು ಅನ್ಯೋನ್ಯರಾಗಿರಬೇಕೇ ಹೊರತು, ಒಬ್ಬರಿಗೊಬ್ಬರು ಕೃತಜ್ಞರಾಗಿರುವುದೆಂಬುದಕ್ಕೆ ಅರ್ಥವೇನಿಲ್ಲ ತಿಳೀತೇ? ನಿನ್ನ ಮೂಲದಿಂದ ನನಗೆ ಉದ್ಯೋಗಬಂದರೆ ಅದು ರಾಜನಿಗೆ ನಿನ್ನ ಮೇಲಿನ ಕರುಣೆಯಿಂದ. ಉದ್ಯೋಗವನ್ನು ನಿಲ್ಲಿಸಿಕೊಳ್ಳುವ ಸಾಮರ್ಥ್ಯ ನನ್ನದೇ ಹೊರತು ನಿನ್ನದಲ್ಲ" ಎಂದನು.



# ತಿರುಗಿಬರುವ ವರಗಳು

ಇಬ್ಬರು ಅಣ್ಣತಮ್ಮಂದಿರು ಊರಿನಲ್ಲಿ ಸುಖವನ್ನು ಕಾಣದೆ ಹಣ ಸಂಪಾದನೆ ಮಾಡಲು ದೇಶದ ಮೇಲೆ ಹೊರಟರು. ದಾರಿಯಲ್ಲಿ ಮಧ್ಯಾಹ್ನವಾಗಲು ಒಂದು ಕಡೆ ಕುಳಿತು ತಮ್ಮ ಬುತ್ತಿಗಂಟು ಬಿಚ್ಚಿದರು. ಆಗ ಒಬ್ಬ ಯೋಗಿ ಅವರ ಬಳಿಗೆ ಬಂದು, "ನನಗೂ ಎರಡು ತುತ್ತು ಕೊಡುವಿರಾ ? ತುಂಬಾ ಹಸಿವೆ" ಎಂದು ಕೈನೀಡಿದನು.

ಅಣ್ಣತಮ್ಮಂದಿರು ಅವರ ಆಹಾರಗಳಲ್ಲಿ ಎರಡು ಭಾಗ ಮಾಡಿ ಒಂದು ಅರ್ಧವನ್ನು ಯೋಗಿಗೆ ಕೊಟ್ಟು ಉಳಿದುದನ್ನು ತಾವಿಬ್ಬರೂ ತಿಂದರು.

ಯೋಗಿ ತುಂಬಾ ತೃಪ್ತನಾಗಿ, "ಈ ದಿನ ಬದುಕಿಸಿದಿರಿ. ನನ್ನ ಹತ್ತಿರ ನನ್ನ ಗುರುಗಳು ಕೊಟ್ಟ ಎರಡು ವರಗಳಿವೆ. ಅವು ತಿರುಗಿಬರುವ ವರಗಳು. ಅವುಗಳನ್ನು ನಿಮಗಿಬ್ಬರಿಗೂ ಒಂದೊಂದು ಕೊಡುತ್ತೇನೆ. ನೀವು ಬೇರೆಯವರಿಗೆ ಏನಾಗಬೇಕೆಂದು ಬಯಸುವಿರೋ ಅದೇ ಮತ್ತೆ ನಿಮಗೂ ಬರುತ್ತೆ" ಎಂದು ಹೇಳಿ ಹೊರಟು ಹೋದನು. ಅವೆಂಥ ವರಗಳೋ ಅವರಿಗೆ ಅರ್ಥವಾಗಲಿಲ್ಲ.

ಆಮೇಲೆ ಇಬ್ಬರೂ ಒಂದೊಂದು ದಿಕ್ಕಿಗೆ ಹೋದರು. ಅಣ್ಣನು ಒಳ್ಳೆಯವನು. ತನಗೆ ಸಹಾಯ ಮಾಡದವರನ್ನು ಕುರಿತು ಏನೂ ಹಚ್ಚಿಕೊಳ್ಳದೆ, ಸಹಾಯ ಮಾಡಿದವರಿಗೆ ಸೌಭಾಗ್ಯ ಬರಲೆಂದು ಹೇಳಿಕೊಳ್ಳುತ್ತಿದ್ದ.

ತಮ್ಮನಿಗೆ ಕೋಪ ಜಾಸ್ತಿ. ತನಗೆ ಸಹಾಯ ಮಾಡದವರನ್ನು ದೂಷಿಸುತ್ತ "ನಿನ್ನ ನಾಲಗೆ ಬಿದ್ದು ಹೋಗ ! ಹಾಳಾಗ ! ನಿನ್ನ ಹೊಟ್ಟೆ ಉರಿಯ !" ಎಂದು ಬೈದುಕೊಳ್ಳುತ್ತಿದ್ದ.

ಯೋಗಿ ಹೇಳಿದಂತೆ ವರಗಳು ಫಲಿಸಿ, ಅಣ್ಣನು ಸೌಭಾಗ್ಯಶಾಲಿಯಾದನು. ತಮ್ಮ ಯಾಗಾಲೂ ರೋಗಿಷ್ಠನಾಗಿ ನರಳಿಕೊಂಡೇ ಇದ್ದನು.





# ಉತ್ತಮ ಮಾರ್ಗ

ಬಹಳ ವರ್ಷಗಳ ಹಿಂದೆ ಕೋಸಲ ದೇಶವನ್ನು ಆಳಿಕೊಂಡಿದ್ದ ಅನಂಗಪಾಲ ಮಹಾರಾಜನನ್ನು ಅವನ ಸೇನಾಪತಿ ಸೌವೀರನು, ಕುತಂತ್ರದ ಜಾಲದಿಂದ ಕೊಂದು ಸಿಂಹಾಸನವನ್ನು ವಶಪಡಿಸಿಕೊಂಡನು. ಅಂತಹ ಅಪಾಯದ ವೇಳೆಯಲ್ಲಿ ಅನಂಗಪಾಲನ ಮೂವರು ಕುಮಾರರೂ ಪ್ರಾಣ ಉಳಿಸಿಕೊಂಡು ಓಡಿ ಹೋಗಿ ಕಾಡು ಸೇರಿದರು. ಅಲ್ಲಿಂದ ಬಹಳ ಕಷ್ಟಪಟ್ಟು ಕಾಶೀ ರಾಜ್ಯಕ್ಕೆ ಹೋಗಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಅಡಗಿಕೊಂಡರು. ಚಿಕ್ಕ ಹುಡುಗರಾದ ಅವರಿಗೆ ಆ ಬ್ರಾಹ್ಮಣನು ವಿದ್ಯೆಗಳನ್ನು ಕಲಿಸಿ, ದೊಡ್ಡವರಾಗುವವರೆಗೂ ತನ್ನ ಮನೆಯಲ್ಲಿಟ್ಟುಕೊಂಡನು. ದೊಡ್ಡವರಾದ ಮೇಲೆ ಆ ಕುಮಾರರನ್ನು ಕುರಿತು, "ನೀವೀಗ ದೊಡ್ಡವರಾಗಿದ್ದೀರಿ. ವಿದ್ಯೆಗಳನ್ನೆಲ್ಲಾ ಕಲಿತಿದ್ದೀರಿ. ಇನ್ನು ಮೇಲೆ ನೀವು ನಿಮಗೆ ಯಾವುದು ಉತ್ತಮ ಮಾರ್ಗವೆಂದು ತೋರುವುದೋ, ಆ ದಾರಿಯನ್ನನುಸರಿಸಿ ಜೀವಿಸಿರಿ" ಎಂದು ಹೇಳಿದನು ಬ್ರಾಹ್ಮಣ.

ಮೂವರಿಗೂ ತಾವು ಯಾರು, ಹೇಗೆ ಈ ಗತಿಗೆ ಬಂದೆವೆಂಬುದು ಗೊತ್ತಿತ್ತು. ಅಂತೆಯೇ ದೊಡ್ಡವನಾದ ಆದಿತ್ಯನಿಗೆ ಸೇನೆಯನ್ನು ಸೇರಿಸಬೇಕಾದುದೇ ಉತ್ತಮವೆಂದು ತೋರಿತು. ಸೇನಾಪತಿ ಸೈನಿಕ ಬಲದಿಂದಲೇ ತಮ್ಮ ರಾಜ್ಯವನ್ನು ವಶಪಡಿಸಿಕೊಂಡಿದ್ದಾನೆಂದು ಅವನು ಭಾವಿಸಿದನು.

ಎರಡನೇಯವನಾದ ವಿಕ್ರಮನಿಗೆ ಎಲ್ಲಾ ಸಾಧನಗಳಿಗೂ ಧನವೇ ಮೂಲವೆಂದು ತೋರಿತು. ಧನವಿಲ್ಲದಿದ್ದರೆ ಸೇನೆಯನ್ನು ಪೋಷಿಸಲು ಸಾಧ್ಯವಾಗದು. ಧನವಿದ್ದರೆ ಬೇಕಾದುದೆಲ್ಲವೂ ಬರುತ್ತೆಂದು ಅವನು ನಿಶ್ಚಯಿಸಿದನು.

ಮೂರನೇಯವನಾದ ಉದಯಭಾನು ಸೈನ್ಯವಾಗಲೀ, ಧನವಾಗಲೀ, ಉನ್ನತ ಧ್ಯೇಯಗಳಲ್ಲವೆಂದೂ, ಇರುವುದರಲ್ಲಿ ತೃಪ್ತಿಯಾಗಿರುವುದೇ ಅತ್ಯುತ್ತಮವೆಂದೂ ತಿಳಿದುಕೊಂಡಿದ್ದನು. ತಮ್ಮ ಸೇನಾಪತಿ ಹಾಗೆ ತೃಪ್ತಿಪಟ್ಟು ಇರುತ್ತಿದ್ದರೆ ತಮ್ಮ ರಾಜ್ಯವು ಕಳೆದುಹೋಗುತ್ತಿದ್ದಿಲ್ಲವೆಂದೇ ಅವನಿಗೆ ತೋರಿತು. ಸೇನಾಪತಿಯ ಅತೃಪ್ತಿಯ ದುಷ್ಟಾಚರಣೆಯಿಂದ ಕೊಲೆಗಳಂತಹ ಬೇಡದ ಕೃತ್ಯಗಳನ್ನು ಮಾಡಿ ಅವನು ಪಾಪದ ಹೊರೆ ಹೊತ್ತಿದ್ದಾನಲ್ಲವೆ? ಹೀಗೆ ಆ ಮೂವರೂ ತಮ್ಮ ಆಶಯಗಳನ್ನು

"ಸುನಂದ"

ಸಾಧಿಸಲು ಹೋಗಬೇಕೆಂದೂ, ಐದು ವರ್ಷಗಳ ಅನಂತರ ತಿರುಗಿ ಮೂವರೂ ಒಂದು ಸ್ಥಳದಲ್ಲಿ ಕಲೆತುಕೊಳ್ಳಬೇಕೆಂದೂ, ನಿಶ್ಚಯಿಸಿಕೊಂಡರು. ಸಂಧಿಸುವ ಸ್ಥಳವನ್ನೂ ಗುರುತಿಟ್ಟುಕೊಂಡರು.

ಆದಿತ್ಯನು ಕೋಸಲರಾಜ್ಯಕ್ಕೆ ಹೋಗಿ ರಹಸ್ಯೋದ್ಯಮಕ್ಕೆ ತೊಡಗಿದನು. ಅವನು ಸೇನಾಪತಿ ಮಾಡಿದ ಕುತಂತ್ರವನ್ನು ಕುರಿತು ಪ್ರಜೆಗಳಲ್ಲಿ ಪ್ರಚಾರ ಮಾಡಿ, ಸಿಂಹಾಸನದ ನಿಜವಾದ ವಾರಸರು ಬದುಕಿರುವ ಸಂಗತಿಯನ್ನು ತಿಳಿಸಿ ಜನರನ್ನು ವಶಪಡಿಸಿಕೊಳ್ಳುತ್ತ ಸೇನೆಯನ್ನು ಶೇಖರಿಸತೊಡಗಿದನು. ಬಂಡಾಯ ವೇಳಲು ಬೇಕಾಗುವಷ್ಟು ಹತ್ತು ಸಾವಿರ ಮಂದಿ ವೀರರ ಸೇನೆ, ದಳಾಧಿಪತಿಗಳೊಂದಿಗೆ ಅವನ ನಾಯಕತ್ವದಲ್ಲಿ ತಯಾರಾಯಿತು. ಈ ಕೆಲಸ ಸಾಧಿಸಿಕೊಂಡು ಅವನು ಐದು ವರ್ಷಗಳಲ್ಲಿ ಗುರುತಿನ ಸ್ಥಳಕ್ಕೆ ತಿರುಗಿ ಬಂದನು.

ವಿಕ್ರಮನು ಧನವನ್ನೇ ಗುರಿಯಾಗಿಟ್ಟುಕೊಂಡು ಕಳ್ಳರ ಗುಂಪು ಸೇರಿ ತನ್ನ ಚಾತುರ್ಯದಿಂದ ಕಳ್ಳರ ನಾಯಕನಾಗಿ, ನೂರುಮಂದಿ ಕಳ್ಳರಿಂದ ಧನದ ಮೂಟೆಗಳನ್ನು ಹೊರಿಸಿಕೊಂಡು ಐದು ವರ್ಷಗಳಲ್ಲಿ ಗುರುತಿನ ಸ್ಥಳಕ್ಕೆ ತಿರುಗಿ ಬಂದನು.

ಉದಯಭಾನು ಈ ಐದು ವರ್ಷಗಳಲ್ಲಿ ಯಾವುದೋ ಒಂದು ಗ್ರಾಮದಲ್ಲಿದ್ದು, ಸ್ವಲ್ಪ ಕಾಲ ವ್ಯವಸಾಯದ ಕೂಲಿಗಳೊಂದಿಗೆ ಕೆಲಸ ಮಾಡಿ, ಕ್ರಮವಾಗಿ ಗ್ರಾಮ ವ್ಯವಹಾರಗಳಲ್ಲಿ ಸಾಹಸ ತೋರಿಸಿ, ಗ್ರಾಮಾಭಿವೃದ್ಧಿಗೆ ಉತ್ತಮ ಸಲಹೆಗಳನ್ನು ನೀಡುತ್ತ, ಬಾವಿ ಕೆರೆಕಾಲುವೆಗಳನ್ನು ತೋಡಿಸುತ್ತ, ಸುತ್ತುಮುತ್ತಿನ ಗ್ರಾಮ ಪ್ರಜೆಗಳಲ್ಲಿ ಒಳ್ಳೆಯ ಹೆಸರನ್ನೂ ಸಂಪಾದಿಸಿ ತಿರುಗಿ ಬಂದನು.

ಮೂವರೂ ತಮ್ಮ ಗುರುಗಳ ಬಳಿಗೆ ಹೋಗಿ ಅವರವರು ಸಾಧಿಸಿಕೊಂಡು ಬಂದ ಕಾರ್ಯವನ್ನು ಕುರಿತು ಹೇಳಿದರು. "ಸರಿ. ನಿಮ್ಮ ನಿಮ್ಮ ಇಷ್ಟದಂತಾಗಲಿ. ಇನ್ನು ನೀವು ಕೋಸಲ ರಾಜ್ಯಕ್ಕೆ ತಿರುಗಿ ಹೋಗಿ, ನೀವು ಸಾಧಿಸಿದ ಶಕ್ತಿಗಳಿಂದ ನಿಮ್ಮ ತಂದೆಯ ರಾಜ್ಯವನ್ನು ತಿರುಗಿ ಸಂಪಾದಿಸಿ ಹಂಚಿ



ಕೊಂಡು ಸುಖವಾಗಿರಿ" ಎಂದು ಬ್ರಾಹ್ಮಣನು ಮೂವರನ್ನೂ ಹರಸಿ ಕಳುಹಿಸಿಕೊಟ್ಟನು.

ದೊಡ್ಡವರಿಬ್ಬರೂ ಮೂರನೇಯವನನ್ನು "ಕೂಪಸ್ಥಮಂಡೂಕ" ಎಂದು ಹೀಯಾಳಿಸಿದರು. ಅವನಿಗೆ ರಾಜ್ಯದ ಕಾಂಕ್ಷೆ ಇರಲಿಲ್ಲ. ದೊಡ್ಡವರು ಅವನ ಗೊಡವೆ ಹಚ್ಚಿಕೊಳ್ಳದೆ, ಕೋಸಲರಾಜ್ಯಕ್ಕೆ ಹೊರಟರು. ದೊಡ್ಡವನಿಗೆ ಎರಡನೆಯವನ ಸ್ವಾಧೀನದಲ್ಲಿರುವ ಧನದ ಮೇಲೆ ಕಣ್ಣು ಬೀಳತೊಡಗಿತು. ಸೈನಿಕರು ರಾಜಭಕ್ತಿಯಿಂದ ಬಂಡಾಯವೇಳಲು ಉತ್ಸಾಹಿತರಾಗಿದ್ದರೂ ಅವರನ್ನು ಪೋಷಿಸಲು ಅವನಿಗೆ ಹಣವೂ ತುಂಬ ಅಗತ್ಯವಾಗಿತ್ತು.

ಅಂತೆಯೇ ಅವನು ವಿಕ್ರಮನೊಂದಿಗೆ, "ನಿನ್ನ ಧನವನ್ನು ನನ್ನ ಸೇನೆಗಾಗಿ ಖರ್ಚು ಮಾಡೋಣ. ರಾಜ್ಯವನ್ನು ಸಂಪಾದಿಸಿಕೊಂಡ ಮೇಲೆ ನಾವಿಬ್ಬರೂ ಹಂಚಿಕೊಳ್ಳಬಹುದು" ಎಂದನು.

"ನನ್ನ ಹಣದಿಂದ ಪೋಷಿಸಲ್ಪಡುವ ಸೇನೆ ನನ್ನದೇ ಆಗುತ್ತದಲ್ಲದೆ ನಿನ್ನ ಸೇನೆ ಹೇಗಾಗುತ್ತೆ? ರಾಜ್ಯದಲ್ಲಿ ನಿನಗೆ ಭಾಗ ಕೇಳುವ ಹಕ್ಕಾದರೂ ಹೇಗೆ ಬರುತ್ತದೆ?" ಎಂದು ವಿಕ್ರಮನು ಅಣ್ಣನನ್ನು ತಿರುಗಿ ಕೇಳಿದನು. ಅಷ್ಟೊಂದು ಸೇನೆಯನ್ನು ಸೇರಿಸಲು ಅಣ್ಣನು ಎಷ್ಟು ಶ್ರಮ ಪಟ್ಟಿರಬಹುದೆಂದು ಅವನು ಯೋಚಿಸಲಿಲ್ಲ.

ತಮ್ಮನ ಮಾತು ಕೇಳಿ ಆದಿತ್ಯನಿಗೆ ಕಿಟ್ಟು ಸಿಟ್ಟು ಬಂತು. ಇಬ್ಬರೂ ಘರ್ಷಣೆಗೆ ಬಿದ್ದು ಆಯುಧ ಪೆತ್ತಿಕೊಂಡರು. ವಿಕ್ರಮನು ತನ್ನ ಅಣ್ಣನನ್ನು ಕೊಂದು, ಸೇನೆಯನ್ನು ತನ್ನ ವಶಕ್ಕೆ ತೆಗೆದುಕೊಂಡನು. ಸ್ವಲ್ಪ ಧನವನ್ನು ಬಹುಮಾನವಾಗಿ ಸೈನಿಕರಿಗೆಲ್ಲಾ ಹಂಚಿ ಕೊಟ್ಟನು. ಆಮೇಲೆ ವಿಕ್ರಮನು ಸೈನಿಕ ಬಲದಿಂದ, ಕುತಂತ್ರದಲ್ಲಿ ಭಾಗಸ್ಥರಾದ ಪ್ರಮುಖರ ಸಹಾಯದಿಂದ ದ್ರೋಹಿಯಾದ ಸೇನಾಪತಿಯನ್ನು ಕೊಂದು ತಾನೇ ರಾಜನಾದನು.

ಆದರೆ ಮುಖ್ಯರಾದ ಕುತಂತ್ರಗಾರರು ವಿಕ್ರಮನು ರಾಜನಾಗಲು ಒಪ್ಪದೆ ತಕರಾರು ತೆಗೆದರು. ಅಸಲು ರಾಜನು ಹಿರಿಯನಾದ ಆದಿತ್ಯನೇ. ವಿಕ್ರಮನು ಅವನನ್ನು ಕೊಂದ ಹಂತಕನು, ಮಹಾ ಪಾಪಿ. ಹೀಗೆ ಕೆಲವರು ಪಿತೂರಿ ಎಬ್ಬಿಸಿದರು. ಮತ್ತೆ ಎರಡು ಪಂಗಡಗಳೇರ್ಪಟ್ಟು ಸಂಘರ್ಷಣೆ ತೊಡಗಿತು. ಆ ಹೋರಾಟದಲ್ಲಿ ವಿಕ್ರಮನು ಸತ್ತುಹೋದನು.

ಸಿಂಹಾಸನಕ್ಕೆ ದಿಕ್ಕಿಲ್ಲದೆ ಹೋಯಿತು. ಆದುದರಿಂದ ಪುರಪ್ರಮುಖರು ಮೂರನೇ ವಾರಸನಾದ ಉದಯಭಾನುವನ್ನು ಹುಡುಕಿ ತಿಳಿಯ ಹೇಳಿ ಪ್ರಾರ್ಥಿಸಿ ಕರೆದುಕೊಂಡು ಬಂದು, ಅವನನ್ನು ಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕ ಮಾಡಿದರು. ಅವನು ಚೆನ್ನಾಗಿಯೇ ರಾಜ್ಯಭಾರ ನಡೆಸಿಕೊಂಡಿದ್ದನು.





# ತಕ್ಕಶಾಸ್ತಿ

ಆ ಊರಿನೊಳಗೆ ಸೀತಾರಾಮನಷ್ಟು ಲೋಭಿ ಬೇರೊಬ್ಬನಿಲ್ಲ. ಹಣ ಖರ್ಚಾಗುತ್ತದೆಂದು ತನ್ನ ಮಗಳಿಗೆ ಮದುವೆ ಕೂಡಾ ಮಾಡಲಿಲ್ಲ. ಮಗಳು ಮದುವೆಗೆ ಬೆಳೆದು ಸುಮ್ಮನೆ ವರ್ಷಗಳುರುಳುತ್ತಿದ್ದುವು.

ಸೀತಾರಾಮನ ಮನೆಯ ಸಮೀಪದಲ್ಲಿ ರಂಗನೆಂಬ ಯುವಕನೊಬ್ಬನಿದ್ದ. ಅವನಿಗೆ ತನ್ನವರೆಂದು ಹೇಳಲು ಯಾರೂ ಇರಲಿಲ್ಲ. ಅವನು ನಗರಕ್ಕೆ ಹೋಗಿ ಹಾಲು ಮಾರಿ ಬರುವ ಲಾಭದಿಂದ ಜೀವನ ನಡೆಸಿಕೊಂಡಿದ್ದ. ಅವನಿಗೆ ಸೀತಾರಾಮನ ಮಗಳನ್ನು ಮಾಡಿಕೊಳ್ಳಬೇಕೆಂದು ತೋರಿತು. ಅವನು ತನ್ನ ಇಚ್ಛೆಯನ್ನು ಸೀತಾರಾಮನಿಗೆ ತಿಳಿಸಿ, ಅದಕ್ಕಾಗಿ ತನಗೆ ಬಟ್ಟೆ ಕೂಡಾ ಕೊಡಬೇಕಾಗಿಲ್ಲವೆಂದೂ, ಮೂರೇ ರೂಪಾಯಿಗೆ ಗುಡಿಯಲ್ಲಿ ಮಾಲೆ ಬದಲಾವಣೆ ಮಾಡಿಕೊಂಡರೆ ಸಾಕೆಂದೂ ಹೇಳಿದನು. ಆ ಮೂರು ರೂಪಾಯಿ ಕೂಡಾ ಖರ್ಚು ಮಾಡಲು ಮನಸ್ಸು ಬಾರದೆ ನೋಡೋಣವೆಂದು, ಮುಂದೂಡಿಕೊಂಡೇ ಬಂದ ಸೀತಾರಾಮ.

ಈ ಸಂದರ್ಭದಲ್ಲಿ ಅದೇನೋ ಒಂದು ದಿನ ಸೀತಾರಾಮನಿಗೆ ಫಕ್ಕನೆ ಸೀಹುಗ್ಗಿ ತಿನ್ನಬೇಕೆಂದು ತೋರಿತು. ಆದರೆ ಎರಡು ಹೊತ್ತು ಗಂಜಿ ಕುಡಿದು, ಮಧ್ಯಾಹ್ನ ಒಂದೇ ಮುಷ್ಟಿ ಅನ್ನ ತಿಂದು ದಿನ ದೂಡುವ ಸಂಸಾರಕ್ಕೆ ಸೀಹುಗ್ಗಿಯ ಖರ್ಚು ಒಂದು ತಿಂಗಳಿಗೆ ಸಾಕಾಗುವಷ್ಟಾಗುತ್ತೆ! ಆದುದರಿಂದ ಸೀತಾರಾಮನು ತನ್ನ ಸೀಹುಗ್ಗಿ ಯಾಶೆಯನ್ನು ಅಡಗಿಸಲು ನೋಡಿದಷ್ಟೂ ಹೆಚ್ಚೆಚ್ಚೇ ಆಯಿತು. ಹೇಗಾದರೂ ಸೀಹುಗ್ಗಿ ತಿಂದು ತೀರಲೇಬೇಕು! ಮನೆಯಲ್ಲಿ ಮಾಡಿದರೆ ಹೆಂಡತಿಯೂ ಮಗಳೂ ಸಹಾ ತಿನ್ನುತ್ತಾರೆ. ಸಮಯಕ್ಕೆ ಪರಿಮಳದ ಜಾಡು ಹಿಡಿದು ನೆರೆಮನೆಯವರಾರಾದರೂ ಬಂದರೆ ಅವರಿಗೂ ಕೊಡಬೇಕಾಗುತ್ತಲ್ಲ!

ಈ ಉಪದ್ರಗಳನ್ನೆಲ್ಲಾ ಆಲೋಚಿಸಿ ಸೀತಾರಾಮನು ಸೀಹುಗ್ಗಿಗೆ ಬೇಕಾದ ಸಾಮಾನುಗಳನ್ನೆಲ್ಲಾ ಗುಟ್ಟಾಗಿ ಒಂದು ಬುಟ್ಟಿಯಲ್ಲಿಟ್ಟುಕೊಂಡು ಅದರ ಮೇಲೆ ಹುಲ್ಲು ಮುಚ್ಚಿ, ಮುಂಜಾನೆ ಕೋಳಿ ಕೂಗುವುದಕ್ಕೆ ಮೊದಲೇ ಹೆಂಡತಿಯನ್ನು ಎಬ್ಬಿಸಿ, "ಏನೇ, ನಾನು ಕೆಲಸದ ಮೇಲೆ ಹೋಗುತ್ತೇನೆ. ಸಾಯಂಕಾಲವಷ್ಟೇ ಬರೋದು" ಎಂದನು. ಒಂದು ದಿನವಾದರೂ ಗಂಡನ ರೊದರೊದ

ಎ. ಕೃಷ್ಣವೇಣಿ

ಎಲ್ಲದ್ದಕ್ಕೆ ಸೀತಾರಾಮನ ಹೆಂಡತಿ ಸಂತೋಷಪಡುತ್ತ, ರಾತ್ರಿ ಉಳಿದ ಗಂಜಿಯನ್ನಿಷ್ಟು ಗಂಡನಿಗೆ ಕುಡಿಯಲು ಕೊಟ್ಟಳು. ಸೀತಾರಾಮ ಆ ಉಪ್ಪು ಗಂಜಿ ಕುಡಿದು, ಕತ್ತಲೆಯಲ್ಲಿ ಬುಟ್ಟಿಯನ್ನು ಎತ್ತಿಕೊಂಡು ಬೇಗಬೇಗನೆ ಕಾಡಿಗೆ ಹೋದನು.

ಯಾರೂ ಬಾರದ ಪ್ರದೇಶ ನೋಡಿ ಬುಟ್ಟಿ ಕೆಳಗಿಳಿಸಿದನು. ಅಲ್ಲಿ ಕಲ್ಲಿನ ಒಲೆಯಿಟ್ಟು, ಒಣಗಿದ ಪುರುಲೆದರಲೆಗಳನ್ನೂ ತಂದು ಹಾಕಿ, ಒಲೆ ಹಚ್ಚಿದನು. ನೀರು, ಹಾಲು, ಅಕ್ಕಿ ಹೆಸರುಬೇಳೆ ಬೆಲ್ಲ ಯಾಲಕ್ಕಿ ಪುಡಿ, ಗೇರು ಬೀಜಗಳನ್ನು ಕ್ರಮವಾಗಿ ತೆಗೆದಿಟ್ಟು, ಸೀಹುಗ್ಗಿ ಮಾಡಲಾರಂಭಿಸಿದನು. ಸೀಹುಗ್ಗಿಯಾದ ಮೇಲೆ, ಅದನ್ನು ಸಾವಕಾಶವಾಗಿ ಸಾಯಂಕಾಲದವರೆಗೂ ಸ್ವಲ್ಪ ಸ್ವಲ್ಪವಾಗಿ ಸವಿದು ತಿನ್ನಬೇಕೆಂದುಕೊಳ್ಳುತ್ತಾ ಜೊಲ್ಲು ನುಂಗುತ್ತಿದ್ದನು.

ಸ್ವಲ್ಪಹೊತ್ತಿಗೆ ತುಪ್ಪ ಯಾಲಕ್ಕಿಗಳೊಡಗೂಡಿದ ಘಮ್ಮೆಂಬ ಸುವಾಸನೆ ಸುತ್ತಲೂ ಇಡುಗಿತು. ಹುಗ್ಗಿ ತಯಾರಾಯಿತು. ಅದನ್ನು ಕೆಳಗಿಳಿಸಿ ತಣಿಯುವುದನ್ನೇ ಕಾಯುತ್ತಾ ಮುಗುಚಿಕೊಂಡಿದ್ದನು. ಆಗ ಅವನ ಹಿಂದಿನಿಂದ ಎರಡು ಕೈಗಳು ಬಂದು ಹುಗ್ಗಿಯ ಪಾತ್ರವನ್ನೇ ಎತ್ತಿಕೊಂಡುವು, ಸೀತಾರಾಮ ಗಾಬರಿಯಿಂದ ಹಿಂದಿರುಗಿ ನೋಡಿದ. ನಾಲ್ವರು ಯಮಕಿಂಕರರಂಥ ಮನುಷ್ಯರು ನಿಂತಿದ್ದರು. ಅವರು ಹೆಸರುವಾಸಿಯಾದ ದೊಡ್ಡ ಕಳ್ಳರು. ಸೀತಾರಾಮನ ಸರ್ವಾಂಗವೂ ಕಂಪಿಸಿತು. ಗಂಟಲೊಣಗಿತು. ಬಾಯಿಯಿಂದ ಮಾತೇ ಹೊರಡದೆ ಮರಗಟ್ಟಿದ.

ಅವನನ್ನು ಲಕ್ಷ್ಯಮಾಡದೆ ನಾಲ್ವರು ಕಳ್ಳರೂ ನಾಲ್ಕು ತೇಗಿನೆಲೆಯನ್ನು ತಂದುಕೊಂಡು ಹುಗ್ಗಿಯನ್ನೆಲ್ಲಾ ಅದರಲ್ಲಿ ಒರೆಸಿ ಹಾಕಿ, ಹರಟೆ ಹೊಡೆಯುತ್ತ ನಡುನಡುವೆ ಭೇಷ್‌ಭೇಷ್ ಎನ್ನುತ್ತಾ, ಎಲ್ಲವನ್ನೂ ತಿಂದು, ಪಾತ್ರೆಯಲ್ಲಿ ಉಳಿದ ಪಸೆಯನ್ನೂ ಒರೆಸಿ ನಕ್ಕಿ, ಸೀತಾರಾಮನಿಗೆ ಕೃತಜ್ಞತೆ ಕೂಡಾ ಹೇಳದೆ, ಮೀಸೆ ಒರೆಸಿಕೊಳ್ಳುತ್ತಾ, ಹೋಗಿಬಿಟ್ಟರು.

ಸೀತಾರಾಮ ಕಾಲೆಳೆದುಕೊಳ್ಳುತ್ತಾ ನಡುಮಧ್ಯಾಹ್ನದಲ್ಲಿ ಮನೆಗೆ ಬಂದ. ಮನೆ ಬಿಕೋ ಅನ್ನುತ್ತಿತ್ತು. ಬಾಗಿಲು ತೆರೆದಿದ್ದುವು. ಹೆಂಡತಿಯೂ ಮಗಳೂ ಇರಲಿಲ್ಲ. ಹಣದ ಪೆಟಾರಿ ತೆರೆದಿತ್ತು. ಓಡಿಹೋಗಿ ನೋಡಿದರೆ, ಅದು ಖಾಲಿಯಾಗಿದೆ.

ಎದೆ ಬಡಿದುಕೊಳ್ಳುತ್ತಾ ಸೀತಾರಾಮ ಬೀದಿಗೆ ಬಂದ. ಆದಿನ ಬೆಳಿಗ್ಗೆ ತನ್ನ ಹೆಂಡತಿ ಮಗಳನ್ನು ರಂಗನಿಗೆ ಕೊಟ್ಟು ಗುಡಿಯಲ್ಲಿ ಮದುವೆ ಮಾಡಿದಳೆಂದು ತಿಳಿಯಿತು. ಎಲ್ಲರೂ ಹೆಂಡತಿಯ ತೌರು ಮನೆಯಲ್ಲಿರಲು ಹೋಗಿದ್ದಾರೆಂದೂ ಗೊತ್ತಾಯಿತು. ಬೇರೆ ದಾರಿ ಕಾಣದೆ ಸೀತಾರಾಮನೂ ಹೊಸ ದಂಪತಿಗಳಿಗೆ ಅಕ್ಷತೆ ಹಾಕಲು ಅಲ್ಲಿಗೇ ಹೋದ.





# ಜೋಯಿಸನ ಅದ್ಭುತ

ಒಂದು ಊರಿಗೆ ಅದ್ಭುತ ಶಕ್ತಿಯ ಜೋಯಿಸನೊಬ್ಬ ಬಂದನು. ಎಲ್ಲರೂ ಅವನನ್ನು ಕುರಿತು ಹೊಗಳುತ್ತಿದ್ದರು. ಅರ್ಜುನನೂ ಸಂಜಯನೂ ಮಿತ್ರರಾಗಿದ್ದರು. ಜೋಯಿಸನ ಸಂಗತಿಯನ್ನು ಕೇಳಿ ಸಂಜಯನು ಅರ್ಜುನನನ್ನು ತನ್ನೊಂದಿಗೆ ಕರೆದುಕೊಂಡು, ಊರಹೊರಗಿನ ಆಲದ ಮರದ ಕಡೆಗೆ ನಡೆಯುತ್ತ, "ನಿನಗೆ ಕೂಡಾ ಜೋಸ್ಯ ಹೇಳಿಸಿಕೊಳ್ಳಬೇಕೆಂದು ಕಾಣುವುದಿಲ್ಲವೇನು ? ಎರಡು ದಿನಗಳ ಕೆಳಗಷ್ಟೇ ಈ ಹೊಸ ಜೋಯಿಸ ಬಂದಿದ್ದಾನೆ. ಅಷ್ಟರೊಳಗೇ ಎಷ್ಟು ಹೆಸರು ! ಭೂತ ಭವಿಷ್ಯ ವರ್ತಮಾನಗಳನ್ನೆಲ್ಲಾ ಹೇಳುತ್ತಾನಂತೆ. ಪ್ರಶ್ನೆಗೆ ಬರೀ ಅರ್ಧ ರೂಪಾಯಿ ! ತುಂಬ ಅಗ್ಗ !" ಎಂದನು.

ತನ್ನ ಭವಿಷ್ಯತ್ತು ತಿಳಿದುಕೊಳ್ಳಲಿಕ್ಕೆ ಅಲ್ಲದಿದ್ದರೂ ಆ ಜೋಯಿಸನ ಭವಿಷ್ಯತ್ತನ್ನು ತಿಳಿದು ತೀರಬೇಕೆಂದು ಅರ್ಜುನನಿಗೆ ತೋರಿತು. ಅವನು ಕಾರ್ಯಕಾರಣ ವಾದವನ್ನು ಅಭ್ಯಾಸ ಮಾಡಿದ್ದನು. ಸ್ವಲ್ಪಮಟ್ಟಿಗೆ ಇಂದ್ರಜಾಲ ವಿದ್ಯೆಯನ್ನೂ ಕಲಿತಿದ್ದನು. ಅಂತೆಯೇ ಅವನು ಇಂತಹರನ್ನೆಲ್ಲಾ ನಂಬುವವನಲ್ಲ. ಈ ಜೋಯಿಸನು ಮೋಸಗಾರನಾದರೆ ಗ್ರಾಮಸ್ಥರನ್ನು ಇವನಿಂದ ಕಾಪಾಡಬೇಕು. ಅಥವಾ ಇವನು ನಿಜಕ್ಕೂ ಸತ್ಯ ಜ್ಯೋತಿಷಿಯಾದರೆ ಅವನ ವಿದ್ವತ್ತಿಗೆ ತಕ್ಕ ರೀತಿಯಲ್ಲಿ ಸನ್ಮಾನಿಸಬೇಕು.

ಹೀಗೆ ಆಲೋಚಿಸಿಕೊಂಡು ಅರ್ಜುನನು ಇತರ ಗ್ರಾಮಸ್ಥರೊಂದಿಗೆ ಕೂಡಿ ಆಲದ ಮರದ ಬುಡಕ್ಕೆ ಹೋದನು. ಅಲ್ಲಿ ಗಂಭೀರವಾಗಿ ಕುಳಿತಿದ್ದ ಜ್ಯೋತಿಷ್ಯನನ್ನು ನೋಡಿದನು.

ಅವನು ಕೆಂಪು ಧೋತ್ರ ಉಟ್ಟುಕೊಂಡು, ಕೆಂಪು ಅಂಗಿಯನ್ನೇ ಹಾಕಿಕೊಂಡಿದ್ದನು. ಅವನ ತಲೆಕೂದಲು ದೀರ್ಘವಾಗಿ ಹೆಗಲಲ್ಲಿ ಹೊರಳಾಡುತ್ತಿದ್ದುವು. ಆದುದರಿಂದ ಅವನಲ್ಲಿ ಸನ್ಯಾಸಿಯ ಕಳೆಯಿತ್ತು.

ಅವನ ಹಿಂದಿನಿಂದ ಕಪ್ಪಗೆ ದಟ್ಟಗೆ ಪೊದರುಗಳಿದ್ದುವು. ಅವನಿಗೂ ಪೊದರುಗಳಿಗೂ ಮಧ್ಯದಲ್ಲಿ ಒಂದು ಮಣ್ಣಿನ ವೇದಿಕೆಯಿದ್ದಿತು. ವೇದಿಕೆಯ ಮಧ್ಯದಲ್ಲಿ ಉಕ್ಕಿನ ಕಂಬಿಯೊಂದನ್ನು ನಿಲ್ಲಿಸಿಡಲಾಗಿತ್ತು. ವೇದಿಕೆಯ ಮೇಲೆ ಹೂವಿನ ದಳಗಳು ಹರಡಿಕೊಂಡಿದ್ದುವು. ವೇದಿಕೆಯ ಒಂದು ಬದಿಯಲ್ಲಿ ಕೆಂಬಣ್ಣ ಪೂಸಿದ ಚಿಕ್ಕದೊಂದು ಕಪಾಲವಿದ್ದಿತು.

ಪಿ. ಸಿ. ಸರ್ಕಾರ್, ಇಂದ್ರಜಾಲಿಕರು



ಆದರಲ್ಲೇ ಜೋಯಿಸನ ಮಹಿಮೆಯಿದ್ದಿತು. ಜೋಯಿಸನು ಧ್ಯಾನದಲ್ಲಿ ಮಗ್ನನಾಗಿದ್ದನು. ಅವನ ಮೂವರು ಶಿಷ್ಯರಲ್ಲಿ ಒಬ್ಬನು ನೋಡಲು ಬಂದವರನ್ನು ಕ್ರಮವಾಗಿ ನಿಲ್ಲಿಸುತ್ತಿದ್ದನು. ಅವರು ಇಪ್ಪತ್ತೈದು ಮಂದಿಗಳಷ್ಟು ಬಂದಿದ್ದರು. ಅಪರಾಹ್ನ ಕಾಲವಾದರೂ ಆ ದೊಡ್ಡ ಆಲದ ಮರದ ಕೆಳಗೆ ಮಸಕುಬೆಳಕಾಗಿಯೇ ಇದ್ದಿತು.

ಸ್ವಲ್ಪ ಹೊತ್ತಿಗೆ ಜೋಯಿಸನು ಕಣ್ಣು ತೆರೆದು, "ನೀವೆಲ್ಲಾ ನಿಮ್ಮ ಭವಿಷ್ಯತ್ತನ್ನು ತಿಳಿಯಬೇಕೆಂದು ಬಂದಿದ್ದೀರಿ. ನಿಜಕ್ಕೂ ನನಗೆ ಜ್ಯೋಸ್ಯವೇನೂ ಗೊತ್ತಿಲ್ಲ. ಜೋಸ್ಯ ಹೇಳುವುದೆಲ್ಲಾ ಈ ಕಪಾಲವೇ. ಇದು ನಾನು ಹುಟ್ಟುವುದಕ್ಕೆ ಮೊದಲು ಈಜಿಪ್ಟಿನಲ್ಲಿ ಸತ್ತುಹೋದ ಮಗುವಿನದು. ಈ ಕಪಾಲವನ್ನು ಭಾರವಾದ ಬಂಗಾರದ ಪೆಟ್ಟಿಗೆಯಲ್ಲಿಟ್ಟು ಮಧ್ಯಧರಾ ಸಮುದ್ರದಲ್ಲಿ ಮಜ್ಜನ ಮಾಡಿದಹೊರತು ಆ ಮಗುವಿಗೆ ಉತ್ತಮ ಲೋಕಗಳು ಸಿಗುವುದಿಲ್ಲ. ಅದಕ್ಕಾಗಿಯೇ ನಾನು ಹಣವನ್ನು ಸಂಗ್ರಹಿಸುತ್ತೇನೆ. ಇದೊಂದು ದೊಡ್ಡ ಪುಣ್ಯ ಕಾರ್ಯವಾಗಿದೆ. ಆದುದರಿಂದ ನೀವು ಪ್ರಶ್ನೆಗೆ ಕೇವಲ ಅರ್ಧ ರೂಪಾಯಿ ಕೊಡಲಿಕ್ಕೆ ಹಿಂದೆ ಮುಂದೆ ನೋಡಬಾರದು. ಒಬ್ಬೊಬ್ಬರಾಗಿ ಬನ್ನಿ. ಸತ್ಯಾನಂದಾ, ಆ ಕಪಾಲವನ್ನು ಇಲ್ಲಿ ಕೊಡು" ಎಂದನು.

ಸತ್ಯಾನಂದನು ವಿನಯ ವಿಧೇಯತೆಯಿಂದ ಕೆಂಪು ಕಪಾಲವನ್ನು ಜೋಯಿಸನ ಕೈಗೆ ಕೊಟ್ಟನು. ಜೋಯಿಸನು ಅದನ್ನು ಎತ್ತಿ ಎಲ್ಲರಿಗೂ ತೋರಿಸಿದನು. ಆ ಕಪಾಲದಲ್ಲಿ ಮೇಲಿನಿಂದ ಕೆಳಕ್ಕೆ ಒಂದು ರಂಧ್ರವಿದ್ದಿತು. ಜೋಯಿಸನು ಮತ್ತೆ ಕಪಾಲವನ್ನು ಸತ್ಯಾನಂದನ ಕೈಗೆ ಕೊಟ್ಟನು. ಸತ್ಯಾನಂದನು ಅದನ್ನು ವೇದಿಕೆಯಲ್ಲಿ ನಿಲ್ಲಿಸಲಾದ ಉಕ್ಕಿನ ಕಂಬಿಯಲ್ಲಿ ಸಿಗಿಸಿ ಇಳಿಸಿದನು.

"ಈಗ ನೀವು ಪ್ರಶ್ನೆಗಳನ್ನು ಕೇಳಬಹುದು. ಕಪಾಲವು ಮೇಲಕ್ಕೆ ಎದ್ದರೆ ಪ್ರಶ್ನೆಗೆ ಹೌದೆಂದು ಅರ್ಥ. ಅದು ಕದಲದೆ ಸುಮ್ಮನಿದ್ದರೆ ಅಲ್ಲವೆಂದು ಅರ್ಥ. ನೆನಪಿಟ್ಟುಕೊಳ್ಳಿ" ಎಂದ ಜೋಯಿಸ.

ಬಂದವರ ಸಾಲಿನಲ್ಲಿ ಎಲ್ಲರಿಗೂ ಮುಂದೆ ನಿಂತಿದ್ದ ಪ್ರಾಯಮೀರಿದವನೊಬ್ಬನು ಜೋಯಿಸನ ಮುಂದಿದ್ದ ಹರಿವಾಣದಲ್ಲಿ ಅರ್ಧ ರೂಪಾಯಿ ಹಾಕಿ "ನಾನಿನ್ನೂ ಹನ್ನೆರಡು ವರ್ಷ ಬದುಕುತ್ತೇನೆಯೇ ?" ಎಂದು ಒಂದು ಪ್ರಶ್ನೆ ಕೇಳಿದ.

ಎಲ್ಲರ ದೃಷ್ಟಿಯೂ ಕಪಾಲದ ಮೇಲೆಯೇ ಇದ್ದಿತು. ವಿಚಿತ್ರವೆಂಬಂತೆ ಕಪಾಲವು ಮೇಲಕ್ಕೆದ್ದು ಕೆಳಗಿಳಿಯಿತು. ಪ್ರಶ್ನೆ ಕೇಳಿದವನು ಹನ್ನೆರಡು ವರ್ಷ ಬದುಕುವವನೆಂದಾಯಿತು. ಅವನು ಜೋಯಿಸನಿಗೆ ನಮಸ್ಕಾರ ಮಾಡಿ ಬದಿಗೆ ಹೋದನು.

ಅನಂತರದವನು ರಾಮನಾಥನೆಂಬ ರೋಗಿಷ್ಠ. ಅವನು ಹರಿವಾಣಕ್ಕೆ ದುಡ್ಡು ಹಾಕಿ, "ನಾನು ಬೇಗದಲ್ಲಿ ಸಾಯುತ್ತೇನೆಯೇ ?" ಎಂದು ಕೇಳಿದ.

ಕಪಾಲ ಕದಲಲಿಲ್ಲ. ಎಲ್ಲರೂ ಕಳೆಗೆಟ್ಟು ಆ ರೋಗಿಯನ್ನು ಪರಿತಾಪವಾಗಿ ನೋಡಿದರು.

ಹೀಗೆ ಎಲ್ಲರೂ ಪ್ರಶ್ನೆಗಳನ್ನು ಕೇಳಿ ಹೊರಟು ಹೋಗುವವರೆಗೂ ಅರ್ಜುನನು ನಡೆಯುವುದನ್ನೆಲ್ಲಾ ಪರೀಕ್ಷಿಸಿ ನೋಡಿಕೊಂಡೇ ಇದ್ದನು. ಅವನೇನೂ ಪ್ರಶ್ನೆ ಕೇಳದೆ ಹಿಂದಿರುಗಿ, ಆ ರಾತ್ರಿಯಿಡೀ ಆಲೋಚನೆ ಮಾಡಿ ಒಂದು ನಿರ್ಧಾರಕ್ಕೆ ಬಂದನು. ಬೆಳಗಾದ ಮೇಲೆ ಮತ್ತೆ ಆ ಜೋಯಿಸನ ಬಳಿಗೆ ಹೋದನು.

"ಏನು ಬೇಕು ನಿನಗೆ?" ಎಂದು ಜೋಯಿಸನು ಮೃದುವಾಗಿ ಕೇಳಿದನು.

"ನನ್ನ ಭವಿಷ್ಯ ಸ್ವಲ್ಪ ತಿಳಿದುಕೊಳ್ಳ ಬೇಕಾಗಿದೆ" ಎಂದ ಅರ್ಜುನ.

"ಅದಕ್ಕೆ ಇದು ಸಮಯವಲ್ಲ. ಕಪಾಲ ಈಗ ವಿಶ್ರಾಂತಿ ತೆಗೆದುಕೊಳ್ಳುತ್ತಾ ಇದೆ. ಎಲ್ಲರ ಜತೆಯಲ್ಲಿ ಅಪರಾಹ್ನ ವೇಳೆಯಲ್ಲಿ ಬಾ. ಪ್ರಶ್ನೆ ಕೇಳಿ ಉತ್ತರ ತಿಳಿದುಕೋ" ಎಂದ ಜೋಯಿಸ.

ಅರ್ಜುನನು ಅಲ್ಲಿಯ ಪರಿಸರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದನು. ವೇದಿಕೆಯ ಪಕ್ಕದಲ್ಲಿರುವ ಚಿಕ್ಕದೊಂದು ಗುಡಾರವು ಅವನನ್ನು ಕುತೂಹಲಗೊಳಿಸಿತು. ಜೋಯಿಸನೂ, ಅವನ ಶಿಷ್ಯರೂ ಆ ಗುಡಾರದೊಳಗೇ ಇರುತ್ತಿದ್ದರು. ಆ ಗುಡಾರವಿರುವ ಸ್ಥಳವನ್ನು ಗಮನಿಸಿದ ಮೇಲೆ ಅವನ ಅನುಮಾನವು ದೃಢವಾಯಿತು.

ಅವನು ಅಲ್ಲಿಂದ ಹಿಂದಿರುಗಿದ ಮೇಲೆ ಈ ಮೋಸವನ್ನು ಹೇಗೆ ಬಯಲು ಮಾಡುವುದೆಂದು ಆಲೋಚಿಸಿದನು. ಅವನು ಆಲೋಚಿಸುತ್ತಾ ತನ್ನ ಮನೆಯ ಜಗಲಿಯಲ್ಲಿ ಕುಳಿತಿದ್ದಾಗ, ಅವನ ಮಗ ಒಂದು ಸೈಕಲ್ ಚಕ್ರವನ್ನು ಒಂದು ಕೋಲಿನಿಂದ ನಡೆಸುತ್ತಾ ಆಟವಾಡುತ್ತಿದ್ದನು. ಅವನನ್ನು ನೋಡಿದ ಕೂಡಲೇ ಅವನಿಗೆ ಒಂದು ಉಪಾಯ ಸ್ಫುರಿಸಿತು. ಅವನು ಸೈಕಲ್ ಚಕ್ರವನ್ನು ತನ್ನ ಮಗನ ಕೈಯಿಂದ ತೆಗೆದು



ಕೊಂಡು, ತಾನೇ ಕೆಲವುಸಾರಿ ನಡೆಯಿಸಿ, ತನಗೆ ಈ ಕಾರ್ಯದಲ್ಲಿ ಜಯವಾಗುವುದೆಂದು ತಿಳಿದು ಸಂತೋಷಪಟ್ಟನು.

ಆ ದಿನ ಅಪರಾಹ್ನದ ವೇಳೆಯಲ್ಲಿ ಅರ್ಜುನನು ತನ್ನ ಮಗನನ್ನು ಕರೆದುಕೊಂಡು ಜೋಯಿಸನ ಬಳಿಗೆ ಹೋದನು. ಅಲ್ಲಿ ಅನೇಕಮಂದಿ ಗ್ರಾಮಸ್ಥರೂ ಸೇರಿಕೊಂಡಿದ್ದರು. ಬೇಗದಲ್ಲೇ ಪ್ರಶ್ನೆಗಳು ಪ್ರಾರಂಭವಾದುವು. ತನ್ನ ಸರದಿ ಬಂದಾಗ ಅರ್ಜುನನು ಕಾಗದದಲ್ಲಿ ಬರೆದ ನಾಲ್ಕು ಪ್ರಶ್ನೆಗಳನ್ನು ಜೋಯಿಸನಿಗೆ ತೋರಿಸಿ, ಹರಿವಾಣದಲ್ಲಿ ಎರಡು ರೂಪಾಯಿ ಹಾಕಿ, "ಅಯ್ಯಾ, ನನ್ನ ಪ್ರಶ್ನೆಗಳಿಗೆ ಉತ್ತರವನ್ನು ತಿಳಿಯುವುದಕ್ಕೆ ಮೊದಲು ಈ ಸೈಕಲು ಚಕ್ರವನ್ನು ಆಚೆಗೆ ಬಿಸುಟುಬಿಡುತ್ತೇನೆ" ಎಂದು ಹೇಳಿ ಜೋಯಿಸನ ಪ್ರತ್ಯುತ್ತರಕ್ಕೆ ಕಾಯದೆ, ಸೈಕಲ್ ಚಕ್ರವನ್ನು ಗುಡಾರಕ್ಕೂ ವೇದಿಕೆಗೂ ಮಧ್ಯದಲ್ಲಿ ಪೊದರಿನ ಕಡೆಗೆ ಬಲವಾಗಿ ಹೊರಳಿಸಿಬಿಟ್ಟನು.

ಚಕ್ರವು ಗುಡಾರಕ್ಕೂ ವೇದಿಕೆಗೂ ನಡುವಿನಿಂದ ಹೊರಳಿ ಹೋದಾಗ ಉಕ್ಕಿನ ಕಂಬಿಗೆ ಸಿಕ್ಕಿಕೊಂಡಿದ್ದ ಕಪಾಲವು ಹಾರಿ ಬಿತ್ತು.

ಆಗ ಅರ್ಜುನನ ಮುಖದ ಮೇಲೆ ಮಂದಹಾಸ ಲಾಸ್ಯವಾಡಿತು. ಜೋಯಿಸನ ಮುಖವು ಬಿಳಿಚಿಕೊಂಡಿತು. ಅವನು ಅರ್ಜುನನನ್ನು ತೀವ್ರವಾಗಿ ನೋಡಿದನು.

ಅರ್ಜುನನು ಅವನಿಗೆ ನಕಲೀ ಮಾಡುತ್ತ, "ಮಹಾ ಜೋತಿಷ್ಯ ಘಂಟಾ ಮಣಿಗಳೇ, ನನ್ನ ಮೊದಲನೇ ಪ್ರಶ್ನೆ ಕೇಳಿರಿ. ಸೂರ್ಯನು ಪೂರ್ವದಲ್ಲಿ ಉದಯಿಸುತ್ತಾನೆಯೇ? ಎರಡನೇ ಪ್ರಶ್ನೆ: ಕಬ್ಬಿಣಕ್ಕಿಂತ ಹತ್ತಿ ಹಗುರೇನು? ಮೂರನೇದು: ಬಂಗಾರವು ಹಿತ್ತಾಳಿಗಿಂತ ಹೆಚ್ಚು ಬೆಲೆಯೇ? ನಾಲ್ಕನೆಯದು: ಮಂಜು ಬೆಂಕಿಗಿಂತಲೂ ತಣ್ಣಗಿರುತ್ತದೆಯೆ? ಅಯ್ಯಾ, ಅದ್ಭುತ ಜೋಯಿಸರೇ, ನಾನು ಹಣವನ್ನು ಕೊಟ್ಟಿರುವೆನಾದುದರಿಂದ ಈ ಸಣ್ಣಸಣ್ಣ ಪ್ರಶ್ನೆಗಳಿಗೆ ಮಾಗುವಿನ ಕಪಾಲದಿಂದ ಉತ್ತರ ಹೇಳಿಸಿರಿ ಮತ್ತೆ" ಎಂದನು.

ಕಪಾಲ ಕದಲಲೇ ಇಲ್ಲ. ಜೋಯಿಸನೂ ಅವನ ಶಿಷ್ಯರೂ ತಪ್ಪಿಸಿಕೊಂಡುಹೋಗುವ ಪ್ರಯತ್ನದಲ್ಲಿರುವುದನ್ನು ನೋಡಿ ಅರ್ಜುನನು ತನ್ನ ಜನರಿಗೆ ಸನ್ನೆ ಮಾಡಿದನು. ಅವರು ಮೋಸಗಾರರನ್ನು ಸುತ್ತಿ ಹಿಡಿದು ಕಟ್ಟಿ ಹಾಕಿದರು. ಆ ಮೇಲೆ ಅರ್ಜುನನು ಗ್ರಾಮಸ್ಥರನ್ನು ನೋಡಿ ಹೀಗೆಂದನು:

"ಮಿತ್ರರೇ, ನಮ್ಮ ಸರಳ ಗುಣವನ್ನು ಆಧಾರ ಮಾಡಿಕೊಂಡು ಈ ಮನುಷ್ಯ ನಮಗೆ ಮೋಸ ಮಾಡಿದ. ಇದು ನಿಜವಾದ ಕಪಾಲವೂ ಅಲ್ಲ. ಕಾಗದದ ಗೊಜ್ಜಿನಿಂದ ಮಾಡಿದಂಥಾದ್ದು. ಇದನ್ನು ಗಟ್ಟಿಯಾದ ಸಪೂರವಾದ ಕಪ್ಪುದಾರದಿಂದ ಮೇಲಕ್ಕೂ ಕೆಳಕ್ಕೂ ಆಡಿಸುತ್ತಾನೆ. ದಾರದ ಒಂದು ಕೊನೆ ಉಕ್ಕಿನ ಕಂಬಿಯ ತುದಿಗೆ ಕಟ್ಟಿದೆ. ಎರಡನೇ ಕೊನೆ ಗುಡಾರದೊಳಗಿರುವ ಒಬ್ಬನ ಕೈಯಲ್ಲಿರುತ್ತದೆ. ಈ ಕಾಗದದ ಕಪಾಲವನ್ನು ಉಕ್ಕಿನ ಕಂಬಿಯಲ್ಲಿ ಇಳಿಸಿದಾಗ ದಾರವು ಅದನ್ನು ಸುತ್ತುತ್ತದೆ. ಗುಡಾರದಲ್ಲಿದ್ದವನು ದಾರ ಎಳೆದರೆ ಕಪಾಲವು ಏಳುತ್ತದೆ. ದಾರವನ್ನು ಬಿಟ್ಟರೆ ಮತ್ತೆ ಕೆಳಗಿಳಿಯುತ್ತದೆ. ನನ್ನ ಮಾತು ನಿಜವೋ ಸುಳ್ಳೋ ನೀವೇ ಈಗ ನೋಡಿರಿ."

ವೇದಿಕೆಯನ್ನೂ ಗುಡಾರವನ್ನೂ ಪರಿಶೀಲಿಸಲಾಗಿ ಅರ್ಜುನನ ಮಾತು ನಿಜವೆಂದು ಎಲ್ಲರಿಗೂ ಗೊತ್ತಾಯಿತು. ಜೋಯಿಸನು ಮೋಸದಿಂದ ಸಂಪಾದಿಸಿದ ಹಣವನ್ನೆಲ್ಲಾ ಗ್ರಾಮಸ್ಥರು ಕಿತ್ತುಕೊಂಡು, ಜೋಯಿಸನನ್ನೂ, ಶಿಷ್ಯರನ್ನೂ ಪೋಲೀಸರಿಗೆ ಒಪ್ಪಿಸಿದರು.





# ಬೇಕಾದಾಗಿನ ಬಹುಮಾನ

ಮಣ್ಣೂರಿನ ಯುವರಾಜ ಯಶೋಧರ್ಮನು ತನ್ನ ಮಿತ್ರರನ್ನೂ ಪರಿವಾರವನ್ನೂ ಕರೆದು ಕೊಂಡು ಕಾಡಿಗೆ ಹೋಗಿ ಬೇಟೆ ಯಾಡಲು ತೊಡಗಿದನು.



ಯುವರಾಜನಿಗೆ ಅಂದವಾದ ಜಿಂಕೆಯೊಂದು ಕಂಡಿತು. ಕುದುರೆಯಿಂದಿಳಿದು ಜಿಂಕೆಯ ಮೇಲೆ ಬಾಣ ಹೊಡೆಯಲು ನೋಡಿದನು. ಜಿಂಕೆ ಮಿಂಚಿನಂತೆ ಓಡಲು, ಯುವರಾಜನು ಅದನ್ನು ಬೆನ್ನಟ್ಟುತ್ತಾ ಪರಿವಾರಕ್ಕೆ ದೂರನಾದನು.



ಅವನು ದಣಿದು ಬಾಯಾರಿದವನಾಗಿ, ಸ್ವಚ್ಛ ವಾದೊಂದು ಪ್ರವಾಹವನ್ನು ನೋಡಿದನು.



ಅವನು ಪ್ರವಾಹಕ್ಕೆ ಹಾರಿ, ಅದರ ವೇಗಕ್ಕೆ ಈಜಲು ಸಾಧ್ಯವಾಗದೆ ಕೈಕಾಲು ಗೆಟ್ಟನು. ಅವನು ಪ್ರವಾಹದಲ್ಲಿ ಹೊಡೆದುಕೊಂಡು ಹೋಗುವಾಗ, ಒಬ್ಬಳು ಯುವತಿ ಒಂದು ಬಳ್ಳಿಯನ್ನು ಅವನಿಗೆ ಸರಿಸಿ, ಅವನು ತೀರ ಸೇರುವಂತೆ ಮಾಡಿದಳು.



ಅವಳು ಒಬ್ಬ ಬ್ರಾಹ್ಮಣನ ಮಗಳು. ಅವನು ಅವಳಿಗೆ ತುಂಬಾ ಬಹುಮಾನ ಕೊಡುವೆನೆಂದನು. ಅವಳು ಅವುಗಳನ್ನು ನಿರಾಕರಿಸಿ, ತನಗೆ ಬಹುಮಾನ ಬೇಕಾದಾಗ, ಸುದ್ದಿ ಕಳುಹಿಸಿ ತೆಗೆದುಕೊಳ್ಳುತ್ತೇನೆಂದಳು.





ಅನೇಕ ವರ್ಷಗಳು ಕಳೆದುವು. ಬ್ರಾಹ್ಮಣನ ಮಗಳಿಗೆ ಮಥುರೆಯ ಅರ್ಚಕನೊಂದಿಗೆ ಮದುವೆಯಾಯಿತು. ಯಶೋಧರ್ಮನು ರಾಜನಾದನು.



ಹೂಣರು ಮಾಳವದಲ್ಲಿ ಗಟ್ಟಿ ತಳವೂರಿದ್ದರು. ಅವರ ನಾಯಕನಾದ ಮಿಹಿರಗುಲನು ಆಗಾಗ ದಂಡಯಾತ್ರೆ ಮಾಡಿ, ಪಟ್ಟಣಗಳನ್ನು ಸುಟ್ಟು ಜನರನ್ನು ಕೊಲ್ಲುತ್ತಿದ್ದನು.



ಆ ಹೂಣರು ಮಥುರೆಯ ಒಂದು ದೇವಾಲಯವನ್ನು ಕೊಳ್ಳೆ ಹೊಡೆದರು. ಆ ದೇವಾಲಯದ ಅರ್ಚಕನನ್ನೇ, ಯುವರಾಜನ ಪ್ರಾಣ ವುಳಿಸಿದ ಬ್ರಾಹ್ಮಣಕನ್ಯೆ ಮದುವೆಯಾಗಿದ್ದಳು. ಅರ್ಚಕನೊಂದಿಗೆ ಅವನ ಹೆಂಡತಿಯನೂ, ಮಗುವನ್ನೂ ಹೂಣರು ನಿರ್ಬಂಧಲ್ಲಿ ಇಟ್ಟಿದ್ದರು.



ಆ ಗಂಡಹೆಂಡಿರ ಮಗಳು ಅತ್ಯಂತ ಸುಂದರಿ. ಅವಳನ್ನು ತನಗೆ ಕೊಟ್ಟು ಮದುವೆ ಮಾಡಿದರೆ ಅವಳ ತಾಯಿ ತಂದೆಯರನ್ನು ಬಿಡುಗಡೆ ಮಾಡುವೆನೆಂದು ಹೂಣರ ನಾಯಕನು ಹೇಳಿದನು.



ಇದಕ್ಕೆ ಅರ್ಚಕನೂ ಅವನ ಹೆಂಡತಿಯೂ, ಮಗಳೂ ಒಪ್ಪಲಿಲ್ಲ. ಅರ್ಚಕನ ಹೆಂಡತಿ ಒಂದು ವ್ಯಕ್ತಿಯ ಮೂಲಕ ಯಶೋಧರ್ಮನಿಗೆ ಸಮಾಚಾರ ಕಳುಹಿಸಿದಳು, ಅಂದು ತನಗೆ ಕೊಡುವೆನೆಂದ ಬಹುಮಾನವಾಗಿ ಹೂಣರೊಂದಿಗೆ ಯುದ್ಧ ಮಾಡಬೇಕು ಎಂದು.



ಯಶೋಧರ್ಮನು ಕೂಡಲೇ ಕೆಲವು ರಾಜರನ್ನೂ ತನ್ನೊಂದಿಗೆ ಕೂಡಿಸಿಕೊಂಡು ಹೂಣರ ಮೇಲೆ ದಂಡೆತ್ತಿ, ಅವರನ್ನು ಘೋರವಾಗಿ ಸೋಲಿಸಿ, ದೊಡ್ಡ ವಿಜಯವನ್ನು ಗಳಿಸಿದನು.



ತನ್ನ ಜೀವವನ್ನು ಕಾಪಾಡಿದವಳನ್ನು ಬಂಧ ಮುಕ್ತಳನ್ನಾಗಿ ಮಾಡಲು ಓಡೋಡಿ ಬಂದು ನೋಡುವಾಗ ಅವಳು ಆಗಲೇ ಸತ್ತು ಹೋಗಿದ್ದಳು. ಯಶೋಧರ್ಮನು ದುಃಖಿಸುತ್ತಾ, ಅವಳ ಋಣ ತೀರಿಸಿಕೊಂಡೆನೆಂದು ತೃಪ್ತನಾಗಬೇಕಾಯಿತು.

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೭೮ ಮೇ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ





Devidas Kasbekar — S. Paramasivan

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಮಾರ್ಚಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಜನವರಿ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಅಲ್ಲೇಕೆ ಬರಿಡೋಲ ಬಾರಿಸ್ತೀ?**

ಎರಡನೇ ಫೋಟೋ: **ಇಲ್ಲಿ ಬಾರಿಸು, ಬಸವ ಆಡಾನು**

ಕಳುಹಿಸಿದವರು: **ಶ್ರೀ ಭಾಗ್ಯಲಕ್ಷ್ಮಿ,**

ತೋಟದೂರು ಗ್ರಾಮ, ಬಸರೀಕಟ್ಟೆ ಪೋಸ್ಟ್, ಚಿಕ್ಕಮಗಳೂರು, ಕರ್ನಾಟಕ



March 1978

# ಮಾಯಾಸರೋವರ

## ೨೬

[ನರಭಕ್ಷಕರಿಗೆ ಮಾಯಾಸರೋವರೇಶ್ವರನು ದೊರಕಿದ ಸಮಯದಲ್ಲಿ ನರವಾನರದ ಮೇಲೆ ಸಿದ್ಧ ಸಾಧಕನು ಅಲ್ಲಿಗೆ ಬಂದನು. ಮಕರಕೇತು ಅಲ್ಲಿಗೆ ಬಂದು ತನ್ನ ಒಡೆಯನನ್ನು ರಕ್ಷಿಸಲು ನೋಡಿ ಜಲ ವೃಕರಾಕ್ಷಸನನ್ನು ಗಾಯಪಡಿಸಿದನು. ನರಭಕ್ಷಕರು ಅವರನ್ನು ತಿನ್ನಲು ಹವಣಿಸುವಾಗ, ಎಲ್ಲರೂ ಅವರ ಮೇಲೆ ತಿರುಗಿಬಿದ್ದರು. ಆಗ ಅಲ್ಲಿಗೆ ಕೆಲವು ಮಂದಿ ಆಶ್ವೀಕರು ಬಂದರು.]

ಶ್ವೀಕರ ಎಚ್ಚರಿಕೆ ಸಿದ್ಧಸಾಧಕನಿಗೆ ಕೇಳಿಸಿತೋ, ೀಳಿಯೂ ಅಲಕ್ಷ್ಯವಾಗಿದ್ದನೋ ತಿಳಿಯದು. ಅವನು ೂಲದ ಮೊನೆಯನ್ನು ಮಾಯಾಸರೋವರೇಶ್ವನ ದೆಗೆ ತಾಗಿಸಿ ಹಿಡಿದ ಕೈಯನ್ನು ಕದಲಿಸಲಿಲ್ಲ. ದರಿಂದ ಮಾಯಾಸರೋವರೇಶ್ವರನು ಭಯದಿಂದ ಡುಗುತ್ತ, "ಇದು ಅನ್ಯಾಯ! ಅಧರ್ಮ! ಯಾರೂ ಮೆಚ್ಚುವಂತಹ ಕೆಲಸವಲ್ಲ. ಶತ್ರು ನ್ಯಮಾರೆತಿರು ಾಗ ವೀರನಾದವನಾವನೂ ಕೊಲ್ಲಲು ಪ್ರಯತ್ನಿಸ ಾರ. ಇದು ಹೇಡಿಗಳ ಕೆಲಸ! ಬಿಡುಬಿಡು!" ಎಂದು ೂಗಿದನು.

"ನಿಜ!" ಎಂದು ಸಿದ್ಧಸಾಧಕನು ಶೂಲವನ್ನು ನೆಲಕ್ಕೆ ಇಳಿಸಿ, "ಒಪ್ಪಿದೆ. ನಾನು ಅಂಥವನಲ್ಲ. ವೀರರೊಳಗೆ ವೀರಾಧಿವೀರ ನಾನು. ಎಲ್ಲಿ, ಕತ್ತಿಯನ್ನು ಹಿರಿ ಬೇಗ. ನಿನ್ನ ಬಲದರ್ಪಗಳು ಎಷ್ಟರಮಟ್ಟಿನದೋ ನೋಡುತ್ತೇನೆ." ಎಂದನು.

ಮಾಯಾಸರೋವರೇಶ್ವರನು ಕತ್ತಿಯ ಹಿಡಿಯ ಕಡೆಗೆ ಕೈಹಾಕಿ, ತೆಗೆಯಲೋ ಬೇಡವೋ ಎಂಬಂತೆ ಹಾಗೆಯೇ ನಿಂತು, ತನ್ನ ಸೇವಕನಾದ ಮಕರಕೇತುವನ್ನು ನೋಡಿದನು. ಅಷ್ಟರಲ್ಲಿ ಅಲ್ಲಿಗೇ ಬಂದ ಆಶ್ವೀಕರ ನಾಯಕನು, ತನ್ನೊಂದಿಗೆ ಬಂದವರನ್ನು



ಹಿಂದೆ ನಿಲ್ಲಿಸಿ, ತಾನು ಒಬ್ಬನೇ ಕುದುರೆಯಿಂದಿಳಿದು ಕೈ ಬೀಸುತ್ತಾ ಬೇಗಬೇಗನೆ ಹಾರಿಹಾರಿ ಮುಂದೆ ಬಂದನು.

ಸಿದ್ಧಸಾಧಕನು ಕೋಪದಿಂದ ಅವನನ್ನು ನೋಡಿ, "ಯಾರು ನೀನು ? ನಮ್ಮ ಜಗಳದಲ್ಲಿ ನಿನಗೇನಯ್ಯ ಕೆಲಸ ? ದೂರ ನಡೆ" ಎಂದು ಅಧಟಿದನು.

ಆಶ್ವೀಕರ ನಾಯಕನು ಆ ಅವಿಧೇಯತೆಯ ಮಾತಿಗೆ ಅವಹೇಳನೆಯಿಂದ ವ್ಯಂಗ್ಯ ನಗುವಿನೊಂದಿಗೆ ಏನೋ ಹೇಳಲು ಬಾಯಿ ತೆರೆದು ಹಾಗೇ ಸ್ತಬ್ಧನಾದನು. ಭಯಂಕರವಾದ ನರವಾನರವನ್ನೂ, ಜಲಗ್ರಹವನ್ನೂ ನೋಡಿ ಸ್ವಲ್ಪ ದಿಗಿಲುಗೊಂಡವನಾಗಿ, ಮಾತು ಹೊರಡಿಸಿ "ನಾನು ಯಾರು, ಯಾರಿಂದ ಕಳಿಸಲ್ಪಟ್ಟು ಇಲ್ಲಿಗೆ ಬಂದವನು ಎಂಬುದನ್ನು ಅಷ್ಟು ದೂರದಿಂದಲೇ ಹೇಳಿದೆನಲ್ಲ? ತಿಳಿಯಲಿಲ್ಲವೇನು ? ಒಂದುವೇಳೆ ಕಿವಿಗಿವಿ ಸರಿಯಾಗಿಲ್ಲವೋ?" ಎಂದನು.

"ನಿನ್ನ ಎಚ್ಚರಿಕೆ ಗಿಚ್ಚರಿಕೆ ಹೆದರಿಕೆ ಬೆದರಿಕೆ ಕೇಳುವ ಸ್ಥಿತಿಯಲ್ಲಿ ನಾನಿರಲಿಲ್ಲ. ನಾನು ನನ್ನ ಶತ್ರುವಾದ ಈ ಮಾಯಾ ಮಾನವ ಪ್ರಾಣಿಯನ್ನು ಓಡಿಹೋಗದಂತೆ ನೋಡಿಕೊಳ್ಳುವ ಪ್ರಯತ್ನದಲ್ಲಿದ್ದೇನೆ. ಕಿವಿ ಕೇಳಿಸದವರು ಇಲ್ಲಿ ಯಾರೂ ಇಲ್ಲ. ಎಚ್ಚರಿಕೆಯಿಂದ ಮಾತಾಡು. ಈಗ ಇನ್ನೊಮ್ಮೆ ಕೇಳುತ್ತೇನೆ. ಈ ಕತ್ತೇ ಕುದುರೆಗಳ ಮೇಲೆ ನಮ್ಮ ನಡುವಿಗೆ ಬಂದಿರುವ ನೀನು ಯಾರು ? " ಎಂದ ಸಿದ್ಧಸಾಧಕ.

ಆಶ್ವೀಕರ ನಾಯಕನು ಕೂಡಲೇ ಉತ್ತರಕೊಡದೆ, ಸಿದ್ಧಸಾಧಕನನ್ನು ಅಡಿಯಿಂದ ಮುಡಿಯವರೆಗೆ ಪರೀಕ್ಷಿಸಿ ನೋಡುತ್ತ, "ಅರೆ, ನೀನು ಸಿದ್ಧಸಾಧಕನಲ್ಲವೇ? ಆದಿನ ಹಿರಣ್ಯಪುರದಲ್ಲಿ ಸ್ಮಶಾನದ ಕಾವಲುಗಾರನ ತಲೆ ಕಡಿದ ತಪ್ಪಿಗೆ ಇನ್ನೊಬ್ಬನೊಂದಿಗೆ ನೀನು ಕೂಡಾ ನಮ್ಮ ಮಹಾರಾಜರಬಳಿಗೆ ಬರಲ್ಪಟ್ಟಿಯಪ್ಪೇ ? ನಮ್ಮ ಮಹಾರಾಜರ ಕಾರ್ಯಕ್ಕೆ ಸಹಾಯಕನಾಗಿ ನೀನೂ ಹೊರಟವನು ತಾನೆ ? " ಎಂದು ಕೇಳಿದನು.

"ಓಹೋ ! ಈಗ ತಿಳಿಯಿತು ನೀನು ಯಾರೆಂಬುದು. ನಿನ್ನ ಹೆಸರು ತಿಳಿಯದು. ನಾನು ಯಾರೆಂಬುದು ನಿನಗೂ ತಿಳಿಯಿತು. ಇನ್ನೇನಿದೆ? ನೀನು ಹೇಳುವುದೆಲ್ಲಾ ಸತ್ಯವೆಂದರಾಯಿತಪ್ಪೆ ? " ಎಂದ ಸಿದ್ಧಸಾಧಕ.

"ನನ್ನ ಹೆಸರು ವೀರಸೇನನೆಂದು. ರಾಜಧಾನಿಯ ಪರಿಸರದಲ್ಲಿ ಅಪಹರಿಲ್ಪಟ್ಟ ನಮ್ಮ ಮಹಾರಾಜ ಕುಮಾರ, ಕುಮಾರಿಯರನ್ನು ಶೋಧಿಸಲು ನಿನ್ನ ಜತೆಯಲ್ಲಿ ಜಯಶೀಲನೆಂಬವನು ಹೊರಟಿದ್ದನಷ್ಟೆ? ಅವನೆಲ್ಲಿ ಕಾಣುವುದಿಲ್ಲ? ಇಬ್ಬರೂ ಒಟ್ಟಿಗೇ ಹೊರಟಿರಲ್ಲ? ಕಡೆಗೆ ನೀವಿಬ್ಬರೂ ಬೇರೆಬೇರೆಯಾದಿರೇನು ? " ಎಂದು ಕೇಳಿದ ವೀರಸೇನ.

"ಒಟ್ಟಿಗೇ ಇದ್ದೆವು. ಆದಿನ ಮಾತ್ರ ಬೇರೆಬೇರೆಯಾದೆವು. ಅವನು ಹಂಸ ರಥದಲ್ಲಿ ಆಕಾಶದಲ್ಲಿ ಎಲ್ಲಿಯೋ ಹಾರಿಕೊಂಡಿದ್ದಾನೆ. ಸದ್ಯ, ಹೆಚ್ಚು

ಮಾತಿಗೆ ಅವಕಾಶವಿಲ್ಲ. ಸ್ವಲ್ಪಬದಿಗೆ ಸರಿ. ಮಹಾ ವೀರನ ಹಾಗೆ ಜಂಬ ಹೇಳಿಕೊಳ್ಳುವ ಭೀರುವಾದ ಈ ನೀರು ಮನುಷ್ಯನ ಆಳ ನೋಡಬೇಕಾಗಿದೆ ಈಗ. ಎಲ್ಲೋ! ಎತ್ತು ಖಡ್ಗ! ಹಾರು ನನ್ನ ಮೇಲೆ, ಬಾ!" ಎನ್ನುತ್ತಾ ಸಿದ್ಧಸಾಧಕನು ಶೂಲವನ್ನು ಮೇಲೆತ್ತಿದನು.

"ಇಲ್ಲಿ ವೃಥಾ ರಕ್ತಪಾತವಾಗಕೂಡದು. ಅದನ್ನು ನಾನು ಸಹಿಸಲಾರೆ!" ಎಂದು ವೀರಸೇನನು, ತನ್ನೊಂದಿಗೆ ಬಂದ ಆಶ್ವೀಕರನ್ನು ಮುಂದೆ ಬರಲು ಸೈಗೆ ಮಾಡಿದನು.

ಆಶ್ವೀಕರು ಕತ್ತಿಗಳನೆತ್ತಿಕೊಂಡು ತನ್ನ ಬಳಿಗೆ ಬರುವುದರೊಳಗೆ ಸಿದ್ಧಸಾಧಕನು, ಸುತ್ತಲೂ ಒಮ್ಮೆ ನೋಡಿ ವೀರಸೇನನೊಂದಿಗೆ, "ನೋಡಯ್ಯಾ, ನಮ್ಮ ಸುತ್ತಲೂ ಅನೇಕ ದಿನಗಳಿಂದ ಉಪವಾಸದಲ್ಲಿ ಹಸಿದು ಬಾಯಿಬಿಡುವ ನರಭಕ್ಷಕರಿದ್ದಾರೆ. ಬೇಕಾದರೆ ಈ ಕ್ಷಣದಲ್ಲಿ ನಿನ್ನನ್ನೂ, ನಿನ್ನ ಕುದುರೇ ಸವಾರರನ್ನೂ, ಅಂಗಾಲಿನಿಂದ ಒರೆಸಿ ಬಿಡಬಲ್ಲೆ. ಹಾಗೆ ಮಾಡಿದರೂ ರಕ್ತಪಾತವಾಗೇ ಆಗುತ್ತದೆ. ಅದರಿಂದ ನರಭಕ್ಷಕರಿಗೆ ಹೊರತು ಬೇರೆಯಾರಿಗೂ ಲಾಭವಾಗದು" ಎಂದನು.

"ಲಾಭನಷ್ಟಗಳ ವಿಚಾರ ನನಗೆ ಜೇಡ. ಮುಖ್ಯ ಸಂಗತಿ ನೆನಪಿಟ್ಟುಕೋ. ಇಲ್ಲಿಗೆ ಸಮೀಪದಲ್ಲೇ ಕನಕಾಕ್ಷ ಮಹಾರಾಜರು ಬಂದು ತಂಗಿದ್ದಾರೆ. ಈಗ ನೀವೆಲ್ಲರೂ ಅಲ್ಲಿಗೆ ಬರಬೇಕು ಇದು ರಾಜಾಜ್ಞೆ!" ಎಂದ ವೀರಸೇನ.

ಸಿದ್ಧಸಾಧಕನು ಕಣ್ಣು ಕೆಂಪು ಮಾಡಿ ಅವನನ್ನು ನೋಡಿ, "ಇದೇನು ಆಜ್ಞೆಯೋ ಕೋರಿಕೆಯೋ? ನನ್ನ ಮಾತನ್ನೂ ನೆನಪಿಟ್ಟು ಮಾತಾಡು. ನಾನು ಈ ಭೂಪ್ರಂಚದಲ್ಲಿ ನನ್ನ ಆರಾಧ್ಯ ದೈವ ಮಹಾಕಾಳನೊಬ್ಬನಿಗೆ ಹೊರತು ಬೇರೆ ಯಾರ ಆಜ್ಞೆಗೂ ಅಧೀನನಾಗುವವನಲ್ಲ. ಗೊತ್ತೇ?" ಎಂದನು.



ಸಿದ್ಧಸಾಧಕನ ಮುಖವನ್ನೇ ನೋಡಿಕೊಂಡಿದ್ದ ಜಲವೃಕ ರಾಕ್ಷಸನು, ಸಾಧಕನಿಗೆ ವೀರಸೇನನ ಮೇಲೆ ಕೋಪ ಬಂದಿರುವುದನ್ನು ಗ್ರಹಿಸಿ, ಕಲ್ಲಿನ ಗದೆಯನ್ನು ನೆಲದ ಮೇಲೆ ಗಟ್ಟಿಯಾಗಿ ಕುಟ್ಟಿ ಹುಲಿಯಂತೆ ಒಂದು ಹೂಂಕಾರ ಮಾಡಿದನು. ಅದನ್ನು ನೋಡಿ ನರವಾನರವೂ ಎದೆ ತಟ್ಟಿ ಕಿರೆಯುತ್ತಾ ಅರಣ್ಯವು ಪ್ರತಿಧ್ವನಿಗೊಡುವಂತೆ ಬೊಬ್ಬಿರಿಯಿತು. ಈ ವಿಕೃತಾಕಾರಗಳ ಅಟ್ಟಹಾಸಗಳನ್ನು ನೋಡಿ ಆಶ್ವೀಕರ ಕುದುರೆಗಳು ಹೆದರಿ ಕುಣಿದುವು. ಒಬ್ಬನ ಕುದರೆಯಂತೂ, ಹಿಂಗಾಲುಗಳ ಮೇಲೆ ನಿಂತು, ತನ್ನ ಮೇಲಿನ ಸವಾರನು ಜಾರಿ ಕೆಳಗೆ ಬೀಳುತ್ತಲೇ ದೂರಕ್ಕೆ ಓಡಿಹೋಯಿತು.

ಇದನ್ನೆಲ್ಲ ನೋಡಿ ಭಯ ಕಂಪಿತನಾದ ವೀರಸೇನನು ಸಿದ್ಧಸಾಧಕನೊಂದಿಗೆ ವಿನಯದಿಂದ, "ಅಯ್ಯಾ, ಕೋಪಿಸಬಾರದು. ನೀವು ಸಹಾ ನನ್ನ ಹಾಗೆಯೇ ಹಿರಣ್ಯಪುರದ ಪ್ರಜೆಗಳೇ. ಮಹಾರಾಜರ



ದಿಂದ, "ಎಲ್ಲಿ ಆ ದುಷ್ಟರು ? ಆರರೇ, ಮಾತಾಡು ವಾಗಲೇ ಮಾಯವಾದರಲ್ಲ! ನೋಡಿರಾ ?" ಎಂದನು ಸಿದ್ಧಸಾಧಕ.

ಆಗ ನರಭಕ್ಷಕರೆಲ್ಲಾ ಒಂದೇಸಾರಿಗೆ, ಹೊಟ್ಟೆ ನುಚ್ಚಾಗುವಂತೆ ನಗತೊಡಗಿದರು. ಅವರ ನಾಯಕ ಹೆಬ್ಬುಲಿಹೆಗ್ಗನೂ, ಮುದಿಪೂಜಾರಿಯೂ ಮುಂದಕ್ಕೆ ಬಂದು ಸಿದ್ಧಸಾಧಕನೊಂದಿಗೆ, "ನೀನೂ ಈ ಕುದು ರೆಯವನೂ ತಗಾದೆ ಮಾಡಿಕೊಂಡಿರುವಾಗ ಅವ ರಿಬ್ಬರೂ ಮೆಲ್ಲಗೆ ಮರಗಳ ಗುಂಪಿಗೆ ಓಡಿದರು. ಅವರೆಲ್ಲಾ ನಮ್ಮ ದೇವರು ನಮಗೆ ಕಳುಹಿಸಿದ ಆಹಾರ. ನಮಗೆ ಬೇಕಾದವರು. ಆದುದರಿಂದ ಅವರನ್ನು ಹಿಡಿಯಲು ನಮ್ಮವರು ಕೆಲವರೂ ಹೋಗಿದ್ದಾರೆ" ಎಂದರು.

"ಯಾರದು ಅರಣ್ಯದೇವರು ?" ಎಂದು ಸಾಧ ಕನು ಕೇಳಲು, ಹೆಬ್ಬುಲಿಹೆಗ್ಗ—"ಅಲ್ಲಿ ಗುಡಿ ಯೊಳಗೆ ಕಾಡಮ್ಮಾ ತಾಯಿಯಾಗಿಯೂ, ನಮ್ಮ ಶತ್ರುಗಳನ್ನು ಕೊಲ್ಲುವಾಗ ಕಾಡಪ್ಪಾ ದೇವ ನಾಗಿಯೂ ರಕ್ಷಿಸುತ್ತಾರೆ. ಅದೆಲ್ಲಾ ದೇವರ ದೂತ ಪೂಜಾರಿಗೆ ಗೊತ್ತು" ಎಂದನು.

"ಹೌದೌದು. ಸಮಯಕ್ಕೆ ಬೇಕಾದ ರೂಪ ಧರಿಸಿ ನಮ್ಮನ್ನು ಕಾಯುವ ಮಹಾದೇವರು!" ಎಂದ ವೃದ್ಧಪೂಜಾರಿ

"ಅದೆಲ್ಲಾ ನಿನ್ನ ಕರಾಮತಿ ಅಂತ ಕಾಣುತ್ತೆ. ಹುಂ. ಅವರು ಓಡಿಹೋಗುವಾಗ ನನಗೇಕೆ ಹೇಳ ಲಿಲ್ಲ ? ಅವರು ಜೀವದೊಂದಿಗೆ ಸಿಗುವವರೆಗೂ ನೀವಿಬ್ಬರೂ ನಮ್ಮ ಖೈದಿಗಳು!" ಎಂದು ಸಿದ್ಧ ಸಾಧಕನು ಜಲವೃಕರಾಕ್ಷಸನನ್ನು ನೋಡಿ, "ಜಲ ವೃಕಾ ! ಇವರಿಬ್ಬರನ್ನೂ ಹಿಡಿದುಕೊಂಡು ಹೋಗಿ ಒಂದು ಕುದುರೇ ಮೇಲೆ ಹಾಕಿ ಹಗ್ಗದಿಂದ ಕಟ್ಟು" ಎಂದನು. ಆ ಕೂಡಲೇ ಜಲವೃಕರಾಕ್ಷಸನು ಹೋ ಎಂದು ಗರ್ಜಿಸಿ ಮಿಂಚಿನ ವೇಗದಲ್ಲಿ ಹೆಬ್ಬುಲಿ

ದರ್ಶನ ಮಾಡಲು ಏಕೆ ಬರಬಾರದು ? ಅವರೇ ಕರೆ ಕಳುಹಿಸುವಾಗ ಬರಬೇಕಾದುದು ನ್ಯಾಯವಲ್ಲವೇ ?" ಎಂದನು ತಲೆಬಾಗಿ.

ಸಿದ್ಧಸಾಧಕನ ಕೋಪವು ಜರ್ರನೆ ಇಳಿದು ಹೋಯಿತು. ಅವನು ಆತ್ಮಾನಂದದಿಂದ ತಲೆ ದೂಗುತ್ತ, "ಈಗ ಹೇಳಿದೆಯಲ್ಲ, ಈ ಪದ್ಧತಿ ಚೆನ್ನಾಗಿದೆ. ಯಾರೂ ಮೆಚ್ಚಬಲ್ಲರು. ಮಹಾ ರಾಜರ ದರ್ಶನಕ್ಕೆ ಆಗತ್ಯವಾಗಿ ಬರುತ್ತೇನೆ. ಒಬ್ಬನೇ ಅಲ್ಲ, ಈ ನರಭಕ್ಷಕರ ಮುಖ್ಯಸ್ಥನನ್ನೂ, ಸರೋ ವರದ ದುಷ್ಟರಿಬ್ಬರನ್ನೂ ಅವರ ಬಳಿಗೆ ಎಳೆದು ಕೊಂಡು ಹೋಗಬೇಕು. ಸರೋವರದವರು ಮಹಾ ಕಳ್ಳರು! ಯಾವ ಕ್ಷಣದಲ್ಲಿಯೂ ತಪ್ಪಿಸಿಕೊಳ್ಳಲು ನೋಡುವವರು!" ಎಂದು ಸುತ್ತಲೂ ನಿಂತಿರುವ ವರನ್ನು ನೋಡಿದನು.

ಮಾಯಾಸರೋವರೇಶ್ವರನೂ, ಮಕರಕೇತುವೂ ಎಲ್ಲಿಯೂ ಕಾಣದಿರುವುದನ್ನು ನೋಡಿ ಆಶ್ಚರ್ಯ

358

ಹೆಗ್ಗನನ್ನೂ ಮುದಿಪೂಜಾರಿಯನ್ನೂ ಒಂದೊಂದು ಕೈಯಲ್ಲಿ ಹಿಡಿದೆಳೆದುಕೊಂಡು ಹೋಗಿ, ಒಂದು ಕುದುರೆಯ ಸವಾರನು ಹೆದರಿ ಕೆಳಗಿಳಿಯುವುದರೊಳಗೇ ಮೊಣಕೈಯಿಂದ ಕುಟ್ಟಿ ಬೀಳಿಸಿ, ಅವರಿಬ್ಬರನ್ನೂ ಆ ಕುದುರೆಯ ಬೆನ್ನಿನ ಮೇಲೆ ಕಟ್ಟಿ ಹಾಕಿದನು.

ಆ ಕೆಲಸ ಮುಗಿದ ಮೇಲೆ ಸಿದ್ಧಸಾಧಕನು ವೀರಸೇನನೊಂದಿಗೆ, "ಇನ್ನು ನೀನು ಮುಂದೆ ನಡೆ. ಕನಕಾಕ್ಷ ಮಹಾರಾಜರನ್ನು ನೋಡೋಣ" ಎಂದು ನರವಾನರ ವಾಹನವನ್ನು ಹೊರಡಿಸಿದನು. ಆಗ ತಾವೇನು ಮಾಡಬೇಕೆಂದು ಆಲೋಚಿಸುತ್ತಾ ನಿಂತಿರುವ ನರಭಕ್ಷಕರ ಗುಂಪನ್ನು ನೋಡಿ ಸಾಧಕನು, "ಎಲವೋ, ಮನುಷ್ಯರನ್ನು ತಿನ್ನುವ ದುಷ್ಟಮನುಷ್ಯರೇ ! ನಿಮ್ಮವರು ಬೆನ್ನಟ್ಟಿಹೋದ ಸರೋವರದವನಿಗಾಗಲಿ, ಅವನ ಬಂಟ ಮೊಸಳೆ ಮುಖದವನಿಗಾಗಲೀ ಏನಾದರೂ ಹಾನಿ ಮಾಡಿದರೆ ನಿಮ್ಮ ದೊರೆಯನ್ನೂ, ಪೂಜಾರಿ ಮುದುಕನನ್ನೂ ಜಜ್ಜಿ ಹಾಕಿಸಿ, ನಿಮ್ಮನೆಲ್ಲಾ ಕ್ರೂರಮೃಗಗಳ ಹಾಗೆ ಬೇಟೆಯಾಡುತ್ತೇನೆ. ನಿಮ್ಮ ದೇವರನ್ನೆಲ್ಲಾ ಓಡಿಸಿಬಿಡುತ್ತೇನೆ. ಜಾಗ್ರತೇ !" ಎಂದು ಶೂಲವನ್ನು ಝಳಪಿಸುತ್ತಾ ಹೆದರಿಸಿದನು.

ನರಭಕ್ಷಕರು ಬಾಯಿ ಬಿಡಲಿಲ್ಲ. ಎಲ್ಲರ ಮುಖವೂ ಆಳುಮೊಗವಾಯಿತು. ತಮ್ಮ ನಾಯಕನನ್ನೂ ಪೂಜಾರಿಯನ್ನೂ ಆರ್ತದೃಷ್ಟಿಯಿಂದ ನೋಡುತ್ತಿದ್ದರು.

ಕುದುರೆಯ ಮೇಲೆ ಬಿಗಿಯಲ್ಪಟ್ಟವರು ಕೈಕಾಲು ಹೊಡೆದುಕೊಳ್ಳುತ್ತ ಪ್ರಲಾಪಿಸುತ್ತಿದ್ದರು. "ಕಾಡಮ್ಮಾ ತಾಯೇ ! ನಮಗಾಗಿ ಮಾನವಾಹಾರಗಳನ್ನು ಕಳುಹಿಸಿ ಪ್ರಾಣಕ್ಕೆ ತಂದೆಯಲ್ಲಾ !" ಎಂದು ಹೆಬ್ಬುಲಿಹೆಗ್ಗನೂ "ಕಾಡಪ್ಪಾ ದೇವಾ ! ಶತ್ರುಗಳನ್ನು ಹತಮಾಡು ! ಹತಮಾಡು !" ಎಂದು



ಪೂಜಾರಿಯೂ ಅಡಿಗಡಿಗೂ ಕೂಗುತ್ತಿದ್ದರು. ವೀರಸೇನನು ಅವರಿಗೆ ಕತ್ತಿ ತೋರಿಸಿ ಹೆದರಿಸುತ್ತ, ತನ್ನ ಅನುಚರರಿಗೆ ರಾಜನ ಬಿಡದಿಯ ಕಡೆಗೆ ಹೋಗಲು ಹೇಳಿದನು. ಅವರ ಹಿಂದಿನಿಂದ ನರವಾನರದ ಮೇಲೆ ಸಿದ್ಧಸಾಧಕನು ಜಲಮೃಕನೊಂದಿಗೆ ಹೋಗುತ್ತಿದ್ದನು.

ಅದೇ ಸಮಯದಲ್ಲಿ ಅರಣ್ಯದ ಮತ್ತೊಂದು ಪ್ರಾಂತದಲ್ಲಿ ಹಂಸರಥದಲ್ಲಿ ಹೋಗುತ್ತಿದ್ದ ಜಯಶೀಲ ಮತ್ತು ಅವನ ಮಿತ್ರರಿಗೆ ಆಕಸ್ಮಿಕವಾಗಿ ಒಂದು ಹೃದಯದ್ರಾವಕವಾದ ದೃಶ್ಯ ಕಾಣಿಸಿತು. ಯುವತಿಯೊಬ್ಬಳು ಭೂಮಿಯಲ್ಲಿ ಹುಲಿಯಿಂದ ತಪ್ಪಿಸಲಿಕ್ಕಾಗಿ ಮರಗಳ ಕಾಂಡದ ಸುತ್ತಲೂ ಗಿರಿಕೀ ಹೊಡೆಯುತ್ತಿದ್ದಾಳೆ. ಮಧ್ಯೆ ಮಧ್ಯೆ ಕೈಗೆ ಸಿಕ್ಕಿದ ಕೊಂಬೆಯನ್ನು ಹಿಡಿದು ನೇತಾಡಿ ಮೇಲೆ ಹತ್ತಿ ಬೀಳುತ್ತಿದ್ದಾಳೆ. ಹುಲಿಯೂ ಎಗರಾಡಿಕೊಂಡು ಅವಳ ಬೆಂಬತ್ತುತ್ತಿತ್ತು.







ಗಳನ್ನು ನೋಡಿ. "ಅಯ್ಯ! ಇಲ್ಲಿ ರಥವನ್ನು ಇಳಿಸುವುದು ಸಾಧ್ಯವಾಗದು. ಸ್ವಲ್ಪ ದೂರದಲ್ಲಿ ಮರವಟ್ಟುಗಳಿಲ್ಲದ ಖಾಲೀ ಪ್ರದೇಶವಿದೆ. ಅಲ್ಲಿ ಇಳಿಸುತ್ತೇನೆ" ಎಂದನು.

ಜಯಶೀಲನು ಕೋಪದಿಂದ, "ಎಲೋ, ಮತಿಗೆಟ್ಟವನೇ! ನೀನು ರಥವನ್ನು ಅಲ್ಲಿ ಇಳಿಸುವುದರೊಳಗೆ ರಾಜಕುಮಾರಿ ಹುಲಿಯ ಹೊಟ್ಟೆಗೆ ಹೋಗಿಬಿಡುತ್ತಾಳೆ. ತಟ್ಟನೆ ರಥ ಕೆಳಕ್ಕೆ ಹೋಗಲಿ. ನಾನು ಮರದ ಕೊಂಬೆಗಳ ಮೇಲೆ ಹಾರುತ್ತೇನೆ. ಹೇಗಾದರೂ ಅವಳನ್ನು ಕಾಪಾಡಲೇ ಬೇಕು. ಇಲ್ಲದಿದ್ದರೆ ಎಲ್ಲಾ ಶ್ರಮವೂ ವ್ಯರ್ಥ!" ಎಂದನು.

ಅಂಗರಕ್ಷಕನು ಹಂಸಗಳ ಕೊರಳಹಗ್ಗವನ್ನು ಕೆಳಗೆಳೆದು ಸೈಗೆ ಮಾಡಿದನು. ಮರಗಳ ಕೊನೆಯ ಕೊಂಬೆಗಳ ಕಡೆಗೆ ಆ ರಥವು ಇಳಿದು ಬಂದಿತು. ಜಯಶೀಲನು ರಥದಿಂದ ಕೆಳಗೆ ಹಾರಿದ ಕೂಡಲೇ ಎರಡು ಕೈಗಳಿಂದಲೂ ಸಿಕ್ಕಿದ ಕೊಂಬೆಯನ್ನು ಹಿಡಿದುಕೊಂಡನು. ಆದರೆ ಅದು ಅವನ ಭಾರಕ್ಕೆ ನಿಟನಿಟಲೆಂದು ಮುರಿಯಿತು. ನಲುವತ್ತು ಐವತ್ತು ಅಡಿಗಳಷ್ಟೆತ್ತರದಿಂದ ಕೊಂಬೆಯೊಂದಿಗೆ ಅವನೂ ನೆಲಕ್ಕೆ ಬಿದ್ದನು.

ಕೊಂಬೆ ನೆಲಕ್ಕೆ ಬೀಳುವುದರೊಳಗೆ ಜಯಶೀಲನು ಒಂದು ಪಲ್ಟೀಹೊಡೆದು ವೇಗವಾಗಿ ನೆಲಮುಟ್ಟಿ, ಕೈಕಾಲುಗಳನ್ನು ಮುರಿದುಕೊಳ್ಳದೆ ಲಾಘವದಿಂದ ತನ್ನನ್ನು ತಾನು ಕಾಪಾಡಿಕೊಂಡು ನೆಟ್ಟಗೆ ನಿಂತನು.

ಆ ಸಮಯದಲ್ಲಿ ಕಾಂಚನಮಾಲೆಯನ್ನು ಬೆಂಬತ್ತಿದ ಹುಲಿ ಕೊಂಬೆ ಮುರಿದುಬಿದ್ದ ಶಬ್ದಕ್ಕೆ ಬೆಚ್ಚಿಬಿದ್ದು ಹಿಂದಿರುಗಿ ನೋಡಿತು. ಈ ಸಂಧಿಯನ್ನು ನೋಡಿ ಕಾಂಚನಮಾಲೆ ಪಕ್ಕದಲ್ಲಿದ್ದ ಮರದ ಕೊಂಬೆಗೆ ಜೋತಾಡಿ ಮೇಲೆ ಹೋಗತೊಡಗಿದಳು. ಹುಲಿ ಅಷ್ಟರಲ್ಲಿ ಭಾರೀಯಾದೊಂದು ಗಾಂಡ್ರಿಕೆ

ಹಂಸರಥದಲ್ಲಿ ವೈದ್ಯದೇವನೆಂದು ಕರೆಯಲ್ಪಡುವ ದೇವಶರ್ಮನು ಅರಣ್ಯವನ್ನು ಸೂಕ್ಷ್ಮವಾಗಿ ನೋಡುತ್ತಿದ್ದುದರಿಂದ, ಮೊದಲು ಅವನ ಕಣ್ಣಿಗೇ ಆ ದೃಶ್ಯ ಕಂಡಿತು. ಅವನು ಭಯಾಶ್ಚರ್ಯಗಳಿಂದ ನಡುಗಿ, ಪಕ್ಕದಲ್ಲಿದ್ದ ಜಯಶೀಲನ ತೋಳನ್ನು ಹಿಡಿದೆಳೆದು ಅದನ್ನು ತೋರಿಸಿ, "ನೋಡು ಜಯಶೀಲಾ, ಹುಲಿಯ ಕಾಟಕ್ಕೆ ಬಿದ್ದ ಅವಳು, ಅವಳೇ ಕಾಂಚನಮಾಲೆ! ಮಾಯಾಸರೋವರೇಶ್ವರನ ಬಂಟರು ಅಪಹರಿಸಿಕೊಂಡು ಹೋದ ಕನಕಾಕ್ಷ ಮಹಾರಾಜರ ಕುಮಾರಿ! ಅಯ್ಯೋ! ನೋಡು! ಈಗೇನು ಮಾಡೋಣ!" ಎಂದನು.

ಜಯಶೀಲನು ತಟಕ್ಕನೆ ಎದ್ದು ನಿಂತು, ಕೆಳಗೆ ಬಗ್ಗಿ ನೋಡಿ, ರಥದ ಸಾರಥಿಯೊಂದಿಗೆ, "ಎಲೋ, ರಥವನ್ನು ತಕ್ಷಣ ಕೆಳಗಿಳಿಸು! ಬೇಗಬೇಗ!" ಎಂದು ಆವಸರದಿಂದ ಹೇಳಿದನು. ಸಾರಥಿಯಾದ ಆ ಅಂಗರಕ್ಷಕನು ಬಗ್ಗಿ ಕೆಳಗಿರುವ ವೃಕ್ಷ



ಹಾಕಿ ಮತ್ತೆ ಅವಳ ಕಡೆಗೆ ಓಡಿ ಛಂಗನೆ ಮರದ ಮೇಲೆ ಹಾರಿತು. ಕತ್ತಿ ಹಿರಿಯಲೂ ವ್ಯವಧಿ ಇಲ್ಲದೆ ಜಯಶೀಲನೂ ಒಮ್ಮೆಗೇ ಲಂಘಿಸಿ ಆ ಹುಲಿಯ ಹಿಂದಿನ ಕಾಲುಗಳೆರಡನ್ನೂ ಹಿಡಿದು ಎಳೆದು ರಭಸದಿಂದ ಬೀಸಿ ಒಗೆದು, ಒಗೆದ ವೇಗಕ್ಕೆ ತಾನೂ ಬಿದ್ದೆದ್ದನು.

ಕಾಂಚನಮಾಲೆಗೆ ಇನ್ನೂ ಸರಿಯಾದ ಕೊಂಬೆಯು ಹಿಡಿತ ಸಿಕ್ಕಿರಲಿಲ್ಲ. ಕಾಲಿನ ಆಧಾರ ತಪ್ಪಿತ್ತು. ಹಿಡಿದ ಕೊಂಬೆಯಲ್ಲೇ ನೇತಾಡುತ್ತ, ಆಯಾಸದಿಂದ ಕೀಕುವ ದನಿಯಿಂದ "ಅಯ್ಯಾ! ಸಮಯಕ್ಕೆ ಬಂದು ಹುಲಿಯ ಬಾಯಿಯಿಂದೆಳೆದು ತಪ್ಪಿಸಿದಿರಿ. ಎಂದೂ ಮರೆಯಲಾರೆ ನಿಮ್ಮನ್ನು!" ಎಂದು ಕೃತಜ್ಞತೆ ಹೇಳಿದಳು.

ಜಯಶೀಲನು ಅವಳ ಸೌಂದರ್ಯವನ್ನು ನೋಡಿ ಅತ್ಯಾಶ್ಚರ್ಯಪಟ್ಟನು. ತಾನು ಇಷ್ಟುಕಾಲ ಬಹಳ ಶ್ರಮಗಳನ್ನು ಅನುಭವಿಸಿ, ಪ್ರಾಣಾಪಾಯಗಳಿಂದ ಪಾರಾಗಿ, ಅಂತೂ ಕಡೆಗೆ ಕನಕಾಕ್ಷರಾಜರ ಮಗಳನ್ನು ರಕ್ಷಿಸಿದ್ದೂ ಕಂಡುಹಿಡಿದದ್ದೂ ಒಂದೇಬಾರಿಗೆ ಆಗಿದೆ. ಆದರೆ ಇವಳ ಅಣ್ಣ ಕಾಂಚನವರ್ಮನೆಲ್ಲಿ? ಅವನ ಗತಿ ಏನಾಗಿದೆಯೋ! ಅವನೂ ಇವಳೂ ಎಷ್ಟು ಕಾಲದಿಂದ ಬೇರೆಬೇರೆಯಾಗಿದ್ದಾರೋ?

"ಕನ್ಯಾಮಣಿಯೇ, ನೀನು ಯಾರೆಂಬುದು ನನಗೆ ಗೊತ್ತಾಗಿದೆ. ನಿನ್ನ ಹೆಸರು ಕಾಂಚನಮಾಲೆ. ನಿನ್ನ ತಂದೆ ಯಾರೆಂಬುದನ್ನೂ ಬಲ್ಲೆ. ನಿನ್ನ ಅಣ್ಣ ಕಾಂಚನವರ್ಮನೆಲ್ಲಿದ್ದಾನೆ? ಹಂಸರಥದಲ್ಲಿ ಆಕಾಶದಿಂದ ಕೆಳಗೆ ಬಿದ್ದ ನೀನು ಇಷ್ಟೊಂದು ಸುರಕ್ಷಿತಳಾಗಿರುವಿಯೆಂದು ನಾನು ನಂಬಿರಲಿಲ್ಲ. ಹೇಗೆ ಪ್ರಾಣದಿಂದ ಉಳಿದೆ?" ಎಂದು ಕೇಳಿದ ಜಯಶೀಲ.

ಜಯಶೀಲನು ಮಾತಾಡುತ್ತಿರುವಾಗಲೇ, ಕಾಂಚನಮಾಲೆ ಮರದ ಕೊಂಬೆಯಿಂದ ನೆಲದ ಮೇಲೆ ಹಾರಿ ನಿಂತು, ಒಳ್ಳೆಯ ಮೈಕಟ್ಟಿನ ಧೈರ್ಯಶಾಲಿಯಾದ ಯುವಕನ ಕಡೆಗೆ ನೋಡುತ್ತ, ಇವನಿಗೆ ತನ್ನ ಹೆಸರು ದೆಸೆಗಳೆಲ್ಲ ಹೇಗೆ ತಿಳಿಯಿತೆಂದು ಆಶ್ಚರ್ಯಪಡುತ್ತ, ಸಹಜಮಂಜುಲ ಧ್ವನಿಯಿಂದ, "ಅಯ್ಯಾ, ನಾನು ಹಂಸರಥದಿಂದ ಬಿದ್ದವಳು, ಆಯುಷ್ಯವಿದ್ದುದರಿಂದ ಕಲ್ಲು ನೆಲಕ್ಕೋ ಮುಳ್ಳಿನ ಪೊದರಿಗೋ ಬೀಳದೆ ಒಂದು ತೊರೆಯ ನೀರಿನಲ್ಲಿ ಬಿದ್ದುದರಿಂದ ಏನೂ ಆಗಲಿಲ್ಲ. ನನ್ನೊಂದಿಗೆ ರಥದಲ್ಲಿದ್ದ ಸರೋವರೇಶ್ವರನೂ, ಅವನ ಸಾರಥಿಯೂ ಬಿದ್ದವರು, ನನ್ನ ಹಾಗೆಯೇ ಇಲ್ಲೆಲ್ಲೋ ಕಾಡಿನೊಳಗೆ ಇರಬಹುದು. ಅವರು ಬದುಕಿರುವಂತಾಗಲೆಂದೇ ದೇವರನ್ನು ಪ್ರಾರ್ಥಿಸುತ್ತೇನೆ. ನನ್ನ ಸಹೋದರನಾದ ಕಾಂಚನವರ್ಮ ರಥದಲ್ಲಿ ಬರಲಿಲ್ಲ. ಮಾಯಾ ಸರೋವರದ ಭವನದೊಳಗೆ ಕ್ಷೇಮವಾಗಿಯೇ ಇದ್ದಾನೆ" ಎಂದಳು.

"ಮಾಯಾಸರೋವರೇಶ್ವರನನ್ನು ಕುರಿತು ಸ್ವಲ್ಪ ವಿಷಯ ನನಗೂ ಗೊತ್ತಿದೆ. ಅವನ ಸೇವಕರಾದ ಸರ್ಪನಖಿ, ಸರ್ಪಸ್ವರರೂ, ಮತ್ತೊಬ್ಬ ಪ್ರಮು





ಖಿನೂ ನನಗ ಪರಿಚಿತರಾಗಿದ್ದಾರೆ. ಮಾಯಾಸರೋವರದಲ್ಲಿರುವ ನಿನ್ನ ಅಣ್ಣನನ್ನು ಕೂಡಾ ಬಂಧ ಮುಕ್ತ ಮಾಡಿ ಕರೆದೊಯ್ಯಬೇಕಾಗಿದೆ. ಅಲ್ಲಿಗೆ ಹೋಗುವ ದಾರಿ ನಿನಗೆ ಗೊತ್ತಿರಬಹುದುಷ್ಟೆ? ಮೊದಲು ನಾವು ಇಲ್ಲೆಲ್ಲೋ ಸಮೀಪದಲ್ಲಿರುವ ನನ್ನ ಮಿತ್ರನಾದ ಸಿದ್ಧಸಾಧಕನನ್ನು ನೋಡಬೇಕು" ಎಂದನು ಜಯಶೀಲ.

ಕಾಂಚನಮಾಲೆ ಅವನೊಂದಿಗೆ ಹೊರಡಲು ತಯಾರಾದಳು. ಆಗ ಜಯಶೀಲನು ಬೀಸಿ ಒಗೆದ ಪೆಟ್ಟಿನಿಂದ ಸೊಂಟ ಮುರಿದ ಹುಲಿ, ಫಕ್ಕನೆ ತಲೆ ಯೆತ್ತಿ ಕೋರೆಗಳನ್ನು ತೋರಿಸುತ್ತ, ಗಾಂಢ್ರಿಸಿ ಕೊಂಡು ಅವರ ಮೇಲೆ ಹಾರಲು ನಿಂತು ಧೊಪ್ಪನೆ ನೆಲಕ್ಕೇ ಬಿತ್ತು..

"ಎಷ್ಟೇ ಕ್ರೂರಮೃಗವಾದರೂ ಈ ಸ್ಥಿತಿಯಲ್ಲಿ ನರಳಾಡುವಂತೆ ಬಿಟ್ಟುಹೋಗುವುದು ಒಳ್ಳೆಯದಲ್ಲ. ಈಗಲೇ ಅದರ ತಲೆಯನ್ನು ಬೇರೆ ಮಾಡಿ ಬಿಡುತ್ತೇನೆ" ಎಂದು ಜಯಶೀಲನು ಕತ್ತಿ ಹಿರಿದು ಕೊಂಡು ಅದರ ಕಡೆಗೆ ನಡೆದನು.

"ಇದೆಂತಹ ಭಾರಿ ಹುಲಿಯಪ್ಪ! ನೀವು ಬರುವುದು ಸ್ವಲ್ಪ ತಡವಾಗಿರುತ್ತಿದ್ದರೆ, ನಾನು ಅದರ ಬಾಯಿಗೆ ಬಿದ್ದುಬಿಡುತ್ತಿದ್ದೆ. ದೇವರೇ ನಿಮ್ಮನ್ನು ಕಳಿಸಿದಂತಿದೆ!" ಎಂದಳು ಕಾಂಚನಮಾಲೆ.

ಆದುವರೆಗೆ ಪಕ್ಕದಲ್ಲಿದ್ದ ದೊಡ್ಡದೊಡ್ಡ ಪೊದರುಗಳ ಮರೆಯಲ್ಲಿ ಜಲಗ್ರಹ ಆನೆಯ ಮೇಲಿದ್ದು ಇದನ್ನೆಲ್ಲ ನೋಡುತ್ತಿದ್ದ ಮಾಯಾಸರೋವರೇಶ್ವರನು, ತನ್ನ ಪಕ್ಕದಲ್ಲಿ ಕುದುರೆಯ ಮೇಲಿರುವ ಮಕರಕೇತುವಿನೊಂದಿಗೆ, ಮೆಲ್ಲನಿಯಿಂದ "ಈ ಜಯಶೀಲನೆಂಬವನನ್ನು ಬಂಧಿಸಲಿಕ್ಕೆ ಇದು ಒಳ್ಳೆಯ ಅವಕಾಶ. ಕಳೆದುಕೊಳ್ಳ ಕೂಡದು. ತಾಮರೆ ದಾರದ ಉರುಳನ್ನು ಅವನ ಕಂಠಕ್ಕೆ ಬೀಸು. ಬೇಗ!" ಎಂದನು.

"ಮಹಾಪ್ರಭು! ಈ ಜಯಶೀಲನು ಮಹಾ ಸತ್ವಶಾಲಿ. ಅವನೊಂದಿಗೆ ವಿರೋಧವು ಒಳ್ಳೆಯದಲ್ಲವೆಂದು ನನಗೆ ಕಾಣುತ್ತದೆ ಅವನ ವಿಷಯದಲ್ಲಿ ನಾನು ಸಾಕಷ್ಟು ಅನುಭವಪಟ್ಟವನು. ಅವನಲ್ಲಿ ಯಾವುದೋ ದೈವಿಕ ಶಕ್ತಿಯೂ ಇರಬಹುದೆಂದು ನನ್ನ ಅನುಮಾನ." ಎಂದು ಮಕರಕೇತು ನಡುಗುವ ಸ್ವರದಲ್ಲಿ ಹೇಳಿದ.

"ಛೀ! ಹೇಡಿಹೆಬಗ! ತಾ ಇತ್ತ!" ಎಂದು ಮಾಯಾಸರೋವರೇಶ್ವರನು ಮಕರಕೇತುವಿನ ತೋಳಿನಲ್ಲಿದ್ದ ಹಗ್ಗದ ಸುರುಳಿಯನ್ನು ಎಳೆದು ಕೊಂಡು, ಅದರ ಉರುಳನ್ನು ಎರಡು ಮೂರು ಸಾರಿ ಗಿರಿಗಿರಿ ತಿರುಗಿಸಿ ಜಯಶೀಲನ ಕಂಠದ ಕಡೆಗೆ ಗುರಿಯಿಟ್ಟು ಬೀಸಿದನು. (ಇನ್ನೂ ಇದೆ)









Ap. March 1978

# ವೀರಹನುಮಾನ್

ಅಯೋಧ್ಯಾ ನಗರದ ರಾಜಭವನದ ಸಭಾಸ್ಥಾನದಲ್ಲಿ ರಾಮನು ಮಂತ್ರಿ ಸಾಮಂತಾದಿಗಳೊಂದಿಗೆ ಸಭೆ ನಡೆಯಿಸಿಕೊಂಡಿದ್ದನು. ಆಗ ಎಲ್ಲರಿಗೂ ಆಶ್ಚರ್ಯವಾಗುವಂತೆ ವಿಶ್ವಾಮಿತ್ರ ಮಹರ್ಷಿ ಬಿರುಗಾಳಿಯ ವೇಗದಲ್ಲಿ ಸಭೆಯೊಳಗೆ ಪ್ರವೇಶ ಮಾಡಿ, ರಾಮನ ಸ್ವಾಗತ ಮರ್ಯಾದೆಗಳೊಂದಕ್ಕೂ ಅವಕಾಶ ಕೊಡದೆ, "ರಾಮಚಂದ್ರಾ ! ಕಾಶೀಪುರದ ರಾಜ ಯಯಾತಿ ಗರ್ವದಿಂದ ಅಂಧನಾಗಿ ನನ್ನನ್ನು ಅವಮಾನ ಪಡಿಸಿದ್ದಾನೆ. ಆ ರಾಜಾಧಮನನ್ನು ನೀನು ಕೂಡಲೇ ಹತ ಮಾಡಿಬಿಡಬೇಕು. ಇದು ನಿನ್ನ ಗುರುವಿನ ಆಜ್ಞೆ ಎಂದು ತಿಳಿ ! ನಂಬಿದ್ದೇನೆ" ಎಂದು ಹೇಳಿ ರಾಮನ ಸಮ್ಮತಿಗೂ ಕಾದಿರದೆ ಬಂದ ವೇಗದಲ್ಲೇ ಹಿಂದಿರುಗಿ ಹೋಗಿಬಿಟ್ಟನು. ಏನೋ ದೊಡ್ಡ ಅನಾಹುತದ ಸೂಚನೆಯಾಗಿತ್ತು ಅದು.

ರಾಮನೂ ಸಭೆಯಲ್ಲಿದ್ದವರೂ ಎದ್ದು ನಿಂತವರು ಸ್ತಬ್ಧರಾಗಿ ವಿಶ್ವಾಮಿತ್ರನ ಆಜ್ಞಾಧ್ವನಿಯನ್ನು ಕೇಳಿದರು. ಯಯಾತಿ ರಾಮನ ಮೇಲೆ ವಿನಯವಿಧೇಯತೆಗಳಿಂದಿರುವವನು. ಕಾಶೀರಾಜ್ಯವನ್ನು ಧರ್ಮ ತಪ್ಪದಂತೆ ಪರಿಪಾಲಿಸುತ್ತಿರುವ ಸಾಮಂತರಾಜ. ಅಂಥವನನ್ನು ಕೊಲ್ಲಲು ವಿಶ್ವಾಮಿತ್ರನ ಆಜ್ಞೆ. ಅವನಾಜ್ಞೆಯನ್ನು ಮೀರಲು ರಾಮನಿಂದ ಎಂದಿಗೂ ಸಾಧ್ಯವಿಲ್ಲ.

ವಿಶ್ವಾಮಿತ್ರನು ಮೊತ್ತಮೊದಲು ಯಾಗರಕ್ಷಣೆಗಾಗಿ ಬಾಲಕರಾದ ರಾಮಲಕ್ಷ್ಮಣರನ್ನು ಕರೆದೊಯ್ದು, ರಾಮನಿಗೆ ಎಷ್ಟೆಷ್ಟೋ ದಿವ್ಯಾಸ್ತ್ರಗಳನ್ನು ಉಪದೇಶಿಸಿ, ಬಲ ಅತಿಬಲ ಮೊದಲಾದ ವಿದ್ಯೆಗಳನ್ನು ಪ್ರಸಾದಿಸಿದ ಗುರುದೇವ. ಅಂತಹ ಗುರುವಿನ ಆಜ್ಞೆಯನ್ನು ಮೀರುವಂತಿಲ್ಲ. ಅತ್ತ ಪ್ರಜಾನುರಂಜಕನಾಗಿ, ತನ್ನ ಮೇಲೆ ಭಕ್ತಿಯುಳ್ಳವನಾಗಿ, ಧರ್ಮನಿರತನಾಗಿರುವ ಯಯಾತಿಯನ್ನು ಕೊಲ್ಲುವ ಬಗೆ ಹೇಗೆ ? ಮಹಾ ಗುರುವಾದ ವಿಶ್ವಾಮಿತ್ರನ ಆಜ್ಞೆಯನ್ನು ನಿರಾಕರಿಸುವುದಾದರೂ ಹೇಗೆ ?

ಇಂತಹ ಧರ್ಮಸಂಕಟದಲ್ಲಿ ಬಿದ್ದ ರಾಮನು ಸಭೆಯನ್ನು ಎಬ್ಬಿಸಿ ಒಳಗೆ ಹೋಗಿ, ಅಂತರಂಗಿಕ ಮಂದಿ

೪೧. ರಾಮಾಂಜನೇಯ ಯುದ್ಧ



41-1



ರಕ್ಕೆ ಸುಮಂತನನ್ನು ಕರೆಯಿಸಿ, "ಸುಮಂತಾ, ಇದು ನನ್ನ ಅಂತರಂಗಿಕ ವಿಷಯವಾಗಿದೆ. ವ್ಯಕ್ತಿಗತ ಸಮಸ್ಯೆ. ಹೇಗಿದ್ದರೂ ಗುರುವಾಜ್ಞೆ ಮೀರಲಾರೆ. ನಾನು ಒಬ್ಬನೇ ಹೋಗಿ ಯಯಾತಿಯನ್ನು ವಧಿಸಿ ಬರುವುದೆಂದೇ ನಿಶ್ಚಯಿಸಿದ್ದೇನೆ. ನಾವಿಬ್ಬರೂ ದ್ವಂದ್ವಯುದ್ಧ ಮಾಡುತ್ತೇವೆ. ಅದರಿಂದ ಯಾವ ಬಗೆಯ ಪ್ರಜೆಗಳ ಪ್ರಾಣಹಾನಿಯೂ ಆಗುವುದಿಲ್ಲ. ರಾಮನು ನಿನ್ನನ್ನು ಕೊಲ್ಲಲಿಕ್ಕೆ ಬರುತ್ತಾನೆಂದು ಯಯಾತಿಗೆ ಸಮಾಚಾರ ಕಳುಹಿಸಿಬಿಡು" ಎಂದು ಸ್ಥಿರಚಿತ್ತದಿಂದ ಹೇಳಿದನು.

ನಡೆದ ಸಂಗತಿ ಏನೆಂದರೆ, ಕಾಶೀ ನಗರವನ್ನು ಪಾಲಿಸುವ ಯಯಾತಿಯೊಂದಿಗೆ ಗ್ರಾಮಗಳ ಪ್ರಜೆಗಳು ಬಂದು, ಅರಣ್ಯದಿಂದ ಆನೆಗಳ ಮಂದೆಯೂ, ಇತರ ಕಾಡು ಮೃಗಗಳೂ ಬಂದು, ತಮ್ಮ ಹಳ್ಳಿಗಳ ಮೇಲೆ ಬಿದ್ದು ಅಪಾರ ಕಷ್ಟನಷ್ಟಗಳನ್ನುಂಟುಮಾಡುತ್ತವೆಂದು ಮೊರೆಯಿಟ್ಟುಕೊಂಡರು.

ಕೂಡಲೇ ಯಯಾತಿ ಆ ಮೃಗಗಳ ಬೇಟೆಗಾಗಿ ಕಾಡಿಗೆ ಹೊರಟನು. ಆಗ ವಿಶ್ವಾಮಿತ್ರನು ಆ ದಾರಿಯಾಗಿ ಬರುತ್ತಿದ್ದನು. ಬೇಟೆಯ ಸಂರ್ರಂಭದಲ್ಲಿ ವೇಗವಾಗಿ ರಥದ ಮೇಲೆ ಧಾವಿಸುತ್ತಿದ್ದ ಕಾಶೀರಾಜನು ವಿಶ್ವಾಮಿತ್ರನ ಆಗಮನವನ್ನು ಗುರುತು ಹಿಡಿಯದೆ ಅಲಕ್ಷ್ಯ ಮಾಡಿ, ಅವನ ಬದಿಯಿಂದಲೇ ರಥವನ್ನು ಹೊಡೆಯಿಸಿಕೊಂಡು ಮುಂದೆ ಸಾಗಿದ್ದನು.

ಅದು ಅವನು ತನಗೆ ತೋರಿಸಿದ ಘೋರವಾದ ಅವಮಾನವೆಂದು ವಿಶ್ವಾಮಿತ್ರನು ಭಾವಿಸಿ, "ರಥದಿಂದಿಳಿದು ನಮಸ್ಕರಿಸಿ, ಭಕ್ತಿಶ್ರದ್ಧೆಗಳಿಂದ ಕುಶಲ ವಿಚಾರಿಸಬೇಕಾಗಿದ್ದ ರಾಜನು, ನನ್ನನ್ನು ಇಷ್ಟು ಅಲಕ್ಷ್ಯದಿಂದ ಪರಾಭವಿಸಿದನಲ್ಲ! ಈ ಯಯಾತಿಯನ್ನು ಅಂತ್ಯಗೊಳಿಸದೇ ಹೋದರೆ ನಾನು ವಿಶ್ವಾಮಿತ್ರನೇ ಅಲ್ಲ!" ಎಂದು ಮೂಗಿನ ತುದಿಯ ಕೋಪದಿಂದ ಪ್ರತಿಜ್ಞೆ ಮಾಡಿ, ಸರಸರನೆ ರಾಮನ ಬಳಿಗೆ ಹೋಗಿ ಆಜ್ಞೆ ಮಾಡಿಬಿಟ್ಟಿದ್ದನು.

ಅಯೋಧ್ಯೆಯ ಚಾರರು ತಂದ ವರ್ತಮಾನವನ್ನು ಕೇಳಿ ಯಯಾತಿ ಮಹಾ ಭೀತಿಯಿಂದ ತತ್ತರಿಸಿದನು. ಯಯಾತಿಯ ಹೆಂಡತಿಯ ಹೆಸರು ಯಶೋಧರೆ. ಈ ದಂಪತಿಗಳಿಗೆ ಚಂದ್ರಾಂಗದನೆಂಬ ಮಗನೂ, ಚಂದ್ರಮುಖಿಯೆಂಬ ಮಗಳೂ ಇದ್ದರು. ಆ ಕುಟುಂಬದವರೆಲ್ಲಾ ರಾಮನ ಮೇಲೆ ತುಂಬಾ ಭಕ್ತಿಶ್ರದ್ಧೆಯುಳ್ಳವರು. ಅವರೆಲ್ಲಾ ಈಗ ಒಂದೇ ಬಗೆಯ ಶೋಕಸಮುದ್ರದಲ್ಲಿ ಮುಳುಗಿ ಹೋದರು. ರಾಮನೇ ಕೊಲ್ಲುವನಾದರೆ ಕಾಯುವರಾರು? ದಶದಿಶೆಗಳಲ್ಲಿಯೂ ಯಮನೇ ಕಾಣುತ್ತಿದ್ದನು ಅವರಿಗೆ. ರಾಮನಿಗೆ ವಿರುದ್ಧವಾಗಿ ಯಾರಲ್ಲಿ ಶರಣಾಗತಿ ಹೊಂದುವುದು?

ಮೂರ್ಛೆ ಬಿದ್ದುಬಿಟ್ಟಿದ್ದ ಯಯಾತಿ ಸ್ವಲ್ಪ ಹೊತ್ತಿನ ಮೇಲೆ ತನ್ನಂತೆ ಮೂರ್ಛೆ ತಿಳಿದು, "ರಾಮಾ, ನಿನಗೇ ಶರಣಾಗತನಾಗಿದ್ದೇನೆ. ನಿರಪರಾಧಿ

ನಾನು. ನಿನ್ನ ದಯೆಯನ್ನೇ ನಂಬಿದ್ದೇನೆ ಎಂದು ನಾನೇ ಸ್ವತಃ ರಾಮನ ಬಳಿಗೆ ಹೋಗಿ ಪ್ರಾರ್ಥಿಸುತ್ತೇನೆ. ಕೊಲ್ಲುವುದಾದರೆ ಅಲ್ಲೇ ಕೊಂದುಬಿಡಲಿ. ಇಲ್ಲಿಯ ವರೆಗೆ ಬರುವ ಶ್ರಮವೇಕೆ ರಾಮನಿಗೆ?" ಎಂದು ಕೊಳ್ಳುತ್ತಾ ಎದ್ದನು.

ಯಯಾತಿ ರಾಜನು ತನ್ನ ಕುಟುಂಬದೊಂದಿಗೆ ಅಯೋಧ್ಯೆಗೆ ಹೊರಡಲು ಸಿದ್ಧನಾದನು. ಸ್ವಲ್ಪ ದೂರ ಹೋಗುವಾಗ ದಾರಿಯಲ್ಲಿ ನಾರದನು ಅವರಿಗೆ ಇದಿರಾಗಿ ಬಂದನು.

ಯಯಾತಿಯನ್ನು ನೋಡಿ ನಾರದನು ಫಕ್ಕನೆ ನಗುತ್ತ, "ಏನೂ ತಿಳಿಯದ ಯಯಾತಿ ರಾಜಾ, ಗುಡ್ಡದಂತೆ ಬೀಳುವ ಆಪತ್ತನ್ನು ನೋಡಿ ಹೆದರಿ ನಿನ್ನ ವಿವೇಕ ಮಣ್ಣು ತಿಂದಹಾಗಿದೆ. ಒಂದೇ ಬಾಣ, ಒಂದೇ ಮಾತು ಎಂಬುದಕ್ಕೆ ಹೆಸರಾದ ರಾಮನು ನಿನ್ನನ್ನು ವಧಿಸುವುದು ನಿಜ. ಬೆಂಕಿಗೆ ಹಾರುವ ಶಲಭದಂತೆ ನೀನಾಗಿ ರಾಮನ ಬಳಿಗೆ ಹೋಗುವ ದೆಂದರೇನಿದು? ಆಲೋಚಿಸುತ್ತಾ ಸಮಯ ಹಾಳು ಮಾಡಬೇಡ. ನನ್ನ ದಿವ್ಯ ಸೂಚನೆ ಕೇಳು. ಅಂಜನಾ ದೇವಿಯ ಆಶ್ರಮಕ್ಕೆ ಈ ಕ್ಷಣವೇ ಹೊರಡು. ಅವ ಳಿಂದ ಅಭಯದಾನ ಪಡೆ. ಹನುಮಂತನು ಅವಳ ಕುಮಾರನೆಂಬುದನ್ನು ಮರೆತೆಯಾ? ಅಲ್ಲಿಯೇ ಇದ್ದಾನೆ, ನಿನ್ನ ಪುಣ್ಯಕ್ಕೆ" ಎಂದು ಹೇಳಿದನು.

ಯಯಾತಿಗೆ ನಾರದನ ಮಾತು ನಂಬುಗೆ ಯನ್ನುಂಟು ಮಾಡಿತು. ಅಲ್ಲಿಂದ ನಿಂತ ಕಾಲಲ್ಲೇ ಅಂಜನಾದೇವಿಯ ಆಶ್ರಮಕ್ಕೆ ಓಡಿದನು. ಆಶ್ರಮ ದಲ್ಲಿ ಅಂಜನಾದೇವಿ ಆಗಲೇ ಧ್ಯಾನ ಮುಗಿಸಿ ಎದ್ದು ಹೊರಗೆ ಬಂದಿದ್ದಳು.

"ಶರಣಾಗತನಾದ ದೀನನು! ರಕ್ಷಿಸು ಅಮ್ಮಾ! ಅಭಯದಾನ! ಅಭಯದಾನ!" ಎಂಬ ಆರ್ತ ನಾದವನ್ನು ಕೇಳಿ ಅಂಜನಾದೇವಿ ಈಚೆಗೆ ಬಂದು ಕೈ ಜೋಡಿಸಿ ಪ್ರಾಣ ಭೀತಿಯಿಂದ ಕಂಪಿಸುತ್ತಾ



ನಿಂತಿರುವ ಯಯಾತಿಯನ್ನು ನೋಡಿದಳು. "ಹೆದರ ಬೇಡವಪ್ಪಾ! ನನ್ನ ಪ್ರಿಯಕುಮಾರ ಹನುಮಂತನ ಮೇಲೆ ಆಣೆ ಹಾಕಿ ಹೇಳುತ್ತೇನೆ. ನಿನಗೆ ಯಾವ ಆಪತ್ತೂ ಬರಲು ಬಿಡಲಾರೆ! ಏನಾಯಿತು ಹೇಳು" ಎಂದು ಅಂಜನಾದೇವಿ ಯಯಾತಿಗೆ ಅಭಯವಚನ ಕೊಟ್ಟಳು.

ಆಗಲೇ ಅಲ್ಲಿಗೆ ಹನುಮಂತನು ಗಂಧಮಾದನ ಪರ್ವತದಿಂದ ಬಂದನು. ಯಯಾತಿ ಆ ತಾಯಿ ಮಗ ಇಬ್ಬರಿಗೂ ದಂಡಪ್ರಣಾಮ ಮಾಡಿ, "ನನ್ನ ಹೆಸರು ಯಯಾತಿ. ಕಾಶೀದೇಶದ ರಾಜ. ರಾಮನ ಸಾಮಂತ ನಾದ ನಾನು ರಾಮನ ಮೇಲೆ ಭಕ್ತಿ ಶ್ರದ್ಧೆಯುಳ್ಳ ವನು. ಈಗ ನನ್ನ ಪ್ರಾಣವನ್ನು ಕಾಪಾಡುವವರು ನಿಮ್ಮ ಹೊರತು ಮತ್ತೊಬ್ಬರಿಲ್ಲ" ಎಂದು ಹೆದ ರುತ್ತಾ ಹೇಳಿದನು.

ಹನುಮಂತನು ಯಯಾತಿಯ ಭುಜ ಹಿಡಿದು ಎಬ್ಬಿಸಿ, "ಓ ರಾಜನೇ, ಈಗತಾನೇ ನನ್ನ ಅಮ್ಮ



ನಿನಗೆ ಅಭಯ ಕೊಟ್ಟಳು ? ಇನ್ನೂ ಭಯದಿಂದ ನಡುಗುವೆ ಏತಕ್ಕೆ ? ನನ್ನ ತಾಯಿಯ ಮಾತನ್ನು ನಡೆಸುವೆನೆಂದು ನಾನೂ ಪ್ರತಿಜ್ಞೆ ಮಾಡಿ ಹೇಳು ತ್ತೇನೆ " ಎಂದನು.

" ಅಯ್ಯೋ ! ಆಂಜನೇಯಾ ! ಏನೆಂದು ಹೇಳಲೀ ? ರಾಮಚಂದ್ರನು ನನ್ನನ್ನು ಕಾರಣವಿಲ್ಲದೆ ಕೊಲ್ಲುವೆ ನೆಂದು ಹೇಳಿ ಕಳುಹಿಸಿದ್ದಾನೆ. ಇದರಲ್ಲಿ ನನ್ನ ತಪ್ಪೇನೂ ಇಲ್ಲ. ಸಮಯ ಸಂದರ್ಭ ವಿಶ್ವಾಮಿತ್ರನಿಗೆ ಗೊತ್ತಾಗಲಿಲ್ಲ " ಎಂದು ಎಲ್ಲಾ ಸಂಗತಿಯನ್ನೂ ಹೇಳಿದನು ಯಯಾತಿ.

ಹನುಮಂತನು ಎಲ್ಲವನ್ನೂ ನಿಶ್ಚಲನಾಗಿದ್ದು ಕೇಳಿ ದನು. ಅಂಜನಾದೇವಿ ದೊಡ್ಡ ಚಿಂತೆಯಿಂದ, " ಎಂತಹ ತಪ್ಪಾಗಿ ಹೋಯಿತು ! ನಾನು ದುಡುಕಿ ಅಭಯ ಕೊಟ್ಟುಬಿಟ್ಟೆನಲ್ಲ! ಈಗೇನು ದಾರಿ ? " ಎಂದು ಚಿಂತಿಸತೊಡಗಿದಳು. ಹನುಮಂತನು ತಾಯಿಯೊಂದಿಗೆ, " ಅಮ್ಮಾ, ಒಂದೇ ದಾರಿ. ಇನ್ನು ಚಿಂತಿಸಿ ಉಪಯೋಗವಿಲ್ಲ. ವಿಶ್ವಾಮಿತ್ರನ ದುಡುಕಿನಾಜ್ಞೆಯಿಂದಲೇ ನೀನು ದುಡುಕಿ ಮಾತು ಕೊಟ್ಟಿರುವೆ. ಅದು ಹಾಗೆಯೇ. ಆರ್ತರನ್ನು ರಕ್ಷಿ ಸುವುದಕ್ಕಿಂತ ದೊಡ್ಡ ಧರ್ಮ ಇಲ್ಲವಷ್ಟೆ ? ನಾನು ಜೀವದಲ್ಲಿರುವಾಗ ಈ ಯಯಾತಿಯ ಪ್ರಾಣಕ್ಕೆ ಯಾವ ಭಯವೂ ಇಲ್ಲ. ಆದುದಾಗಲಿ ! " ಎಂದು ಹೇಳಿದನು.

ಯಯಾತಿಗೆ ಹನುಮಂತನು ಅಭಯಪ್ರದಾನ ಮಾಡಿದ ಸಂಗತಿ ಎಲ್ಲರಿಗೂ ತಿಳಿಯಿತು. ಅಯೋಧ್ಯೆಗೂ ಹೋಗಿ ಸೇರಿತು. ರಾಮನ ಕಿವಿಗೂ ಈ ಸುದ್ದಿ ಮುಟ್ಟಿತು. ಸೀತೆಗೂ ತಿಳಿಯಿತು. ಯಾರಿಗೂ ಏನೂ ತೋರಲಿಲ್ಲ.

ಸೀತಾದೇವಿ ಅಂತಃಪುರದಿಂದ ಹೊರಗೆ ಬರು ತ್ತಿರುವಾಗ, ಯಶೋಧರೆ ಇಬ್ಬರು ಮಕ್ಕಳನ್ನು ಕರೆದುಕೊಂಡು ತನ್ನ ಬಳಿಗೆ ಬರುವುದನ್ನು ನೋಡಿ ನಿಂತಳು. ಯಶೋಧರೆ ಸೀತೆಯನ್ನು ನೋಡಿ, " ಅಮ್ಮಾ, ರಕ್ಷಿಸು. ಭಿಕ್ಷೆ ಕೊಡಿಸು. ನನಗೆ ಪತಿ ಭಿಕ್ಷೆ ಕೊಡಿಸಮ್ಮಾ ! " ಎಂದು ಕಣ್ಣೀರಿಳಿಸುತ್ತ ಆರ್ತಳಾಗಿ ಬೇಡಿದಳು.

ಸೀತೆ ಅವಳನ್ನು ನೋಡಿ, " ಧೈರ್ಯವಾಗಿರಮ್ಮ. ನಿನ್ನ ಗಂಡ ಅಂಜನಾಶ್ರಮದಲ್ಲಿ ಹನುಮಂತನ ಹತ್ತಿರ ಕ್ಷೇಮವಾಗಿರುವನೆಂದು ಗೊತ್ತಾಗಿದೆ. ಅವನಿಗೆ ಇನ್ನು ಯಾವ ಭಯವೂ ಇಲ್ಲವೆಂದು ನಂಬು. ನೀನೂ ನಿನ್ನ ಮಕ್ಕಳೂ ಇಲ್ಲಿಯೇ ನನ್ನ ಜತೆ ಯಲ್ಲಿದ್ದುಬಿಡಿರಿ " ಎಂದು ಹೇಳಿ, ಅಂತಃಪುರದಲ್ಲಿ ಅವರಿಗೆ ಸಕಲ ಮರ್ಯಾದೆಗಳೊಂದಿಗೆ ಇರಲು ಏರ್ಪಾಡು ಮಾಡಿಸಿದಳು. ಆ ಮಕ್ಕಳಿಬ್ಬರಿಗೂ ಕ್ಷಣ ಮಾತ್ರದಲ್ಲಿ ಸೀತೆಯೊಂದಿಗೆ ತುಂಬಾ ಸಲಿಗೆಯುಂಟಾ ಯಿತು. ಅಂತಹ ಮಕ್ಕಳು ತನಗೂ ಇದ್ದರೆ ಒಳ್ಳೆ ಯದಿತ್ತೆಂದು ಸೀತೆಯ ಮನಸ್ಸಿನೊಳಗೊಂದು ಸಂತಾನವಾಂಛೆಯೂ ಅಂಕುರಿಸಿತು.



41-4

ರಾಮನು ಧನುರ್ಬಾಣಗಳನ್ನು ಧರಿಸಿ ಯಯಾತಿಯನ್ನು ವಧಿಸಲಿಕ್ಕಾಗಿ ಪಾದಚಾರಿಯಾಗಿಯೇ ಹೊರಟನು. ಅವನ ಹಿಂದೆ ಮೂವರು ತಮ್ಮಂದಿರೂ, ಮಂತ್ರಿ ಪರಿವಾರದವರೂ ಹೊರಟಿದ್ದರು. ರಾಮನ ಹೊರತು ಉಳಿದವರ ಕೈಯಲ್ಲಿ ಯಾವುದೊಂದು ಆಯುಧವೂ ಇರಲಿಲ್ಲ.

ಅಂಜನಾದೇವಿಯ ಆಶ್ರಮದಲ್ಲಿ ರಾಮನನ್ನೇ ಇದಿರು ನೋಡಿಕೊಂಡಿದ್ದ ಹನುಮಂತನು, ರಾಮನು ಬಳಿಗೆ ಬಂದ ಕೂಡಲೇ ಸ್ವಾಗತ ವಚನ ಹೇಳುತ್ತ ಅಂಜಲಿಯಲ್ಲಿದ್ದ ಹೂಗಳನ್ನು ನಮಸ್ಕಾರಪೂರ್ವಕ ರಾಮನ ಪಾದಗಳ ಮೇಲೆ ಚೆಲ್ಲಿ ವೀರವಂದನೆ ಮಾಡಿ ನಿಂತನು.

ಅನಂತರ ಹನುಮಂತನು ರಾಮನ ಪಾದಗಳ ಮುಂದೆ ಮಂಡಿಯಿಟ್ಟು ಕೈ ಮುಗಿದು, "ರಾಮಾ, ಯಯಾತಿಯ ಮೇಲೆ ಅನುಗ್ರಹ ತೋರಿಸು. ಅವನು ನಿರಪರಾಧಿ. ಬಲಹೀನನಾದವನನ್ನು ಸುಮ್ಮನೆ ವಧಿಸುವುದು ನಿನ್ನಂಥವನಿಗೆ ತರವಲ್ಲ, ಅದು ಹತ್ಯಕ್ಕೆ ಸಮಾನವೆಂದು ಲೋಕವು ನಿಂದಿಸಲಾರದೇ ? ಅವನ ಪಕ್ಷವಾಗಿ ನಾನು ಬೇಡಿಕೊಳ್ಳುತ್ತೇನೆ. ದಯಮಾಡಿ ಕ್ಷಮಿಸು. ಕಾಪಾಡು !" ಎಂದು ಹೇಳಿದನು.

ರಾಮನು ಕೋಪದಿಂದ, "ಓಹೋ ! ನನಗೇ ಬುದ್ಧಿ ಹೇಳುವಷ್ಟರಮಟ್ಟಿಗೆ ಬಂದೆಯೇನು ?" ಎಂದು ಹನುಮಂತನನ್ನು ಪಾದದಿಂದ ಒದೆದನು. ರಾಮನ ಪಾದದ ಸ್ಪರ್ಶದಿಂದ ಹನುಮಂತನು ಪರವಶನಾಗಿ, "ಆಹಾ ! ಯಾವ ಪಾದವು ತಾಗಿದ ಕೂಡಲೇ ಬಂಡೆಗಲ್ಲಿಗೆ ಶಾಪವಿಮೋಚನೆಯಾಗಿ, ಅಹಲ್ಯೆಗೆ ಪವಿತ್ರತೆ ಬಂದಿತೋ, ಅಂತಹ ನಿನ್ನ ಪಾದ ಸ್ಪರ್ಶದಿಂದ ನನ್ನ ಶರೀರ ಧನ್ಯತೆ ಪಡೆಯಿತು. ಇಂತಹ ಧನ್ಯತೆ ಈವರೆಗೂ ಸಿಕ್ಕಿರಲಿಲ್ಲ. ಇದನ್ನು ಒದಗಿಸಿದ ಯಯಾತಿ ದೀರ್ಘಾಯುವಾಗಿರಲಿ ! ನನ್ನ ಶರೀರಕ್ಕೆ ಈಗ ಅಪೂರ್ವ ಶಕ್ತಿ ಬರುವುದನ್ನು



ನೋಡುತ್ತಿದ್ದೇನೆ" ಎಂದನು. ಅವನು ಹೇಳಿದ ಮಾತಿನಿಂದ ರಾಮನು ಇನ್ನಷ್ಟು ಸಿಟ್ಟಿಗೆದ್ದು, "ಎಲವೋ ವಾನರಾ ! ಇಂತಹ ಹೊಗಳಿಕೆಯ ಮಾತುಗಳನ್ನು ಕಟ್ಟಿಟ್ಟು ಯಯಾತಿಯನ್ನು ಹೊರಗೆ ಬಿಡು. ವೀರನಂತೆ ನನ್ನೊಂದಿಗೆ ದ್ವಂದ್ವಕ್ಕೆ ಬರಲಿ. ಗುರುವಾಜ್ಞೆಯನ್ನು ಪಾಲಿಸಬೇಕೆಂದೇ ಬಂದವನು ನಾನು ! ಬರಿಗೆ ಸರಿ. ನನ್ನನ್ನು ತಡೆಯುವ ಸಾಹಸ ಮಾಡಬೇಡ." ಎಂದನು.

"ರಾಮಾ, ನಿನ್ನ ಗುರುವಿನ ಆಜ್ಞೆ ಎಷ್ಟು ಅನ್ಯಾಯವೆಂಬುದನ್ನು ತಿಳಿದುಕೊಳ್ಳದೆ, ಒಬ್ಬ ಸಾಧುವನ್ನು ಕೊಲ್ಲಲು ಇಲ್ಲಿಗೆ ಬಂದಿರುವೆಯಲ್ಲಾ ? ನನ್ನ ತಾಯಿಯ ಮಾತನ್ನು ಕಾಪಾಡಲಿಕ್ಕಾಗಿ ಯಯಾತಿಗೆ ರಕ್ಷೆಯಾಗಿ ನಾನು ನಿಂತಿದ್ದೇನೆ. ನನ್ನನ್ನು ಕೊಂದು ಆಮೇಲೆ ನೀನು ಬಂದ ಕೆಲಸ ನೋಡಿಕೋ" ಎಂದು ಹನುಮಂತನು ಗಂಭೀರವಾಗಿ ಎದ್ದು ನಿಂತನು. ಇದ್ದಕ್ಕಿದ್ದ ಹಾಗೆ ಹನುಮಂತನ ಶರೀರವು ಬೆಳೆಯ



ತೊಡಗಿತು. ಜಗಜಗಿಸುವ ಪ್ರಕಾಶವನ್ನು ಚಿಮ್ಮ ತೊಡಗಿತು ಅವನ ಶರೀರ.

ಅದನ್ನು ನೋಡಿ ರಾಮನು, " ಓಹೋ ! ಇಷ್ಟರ ಮಟ್ಟಿನವನಾದೆಯಾ ? ಏನೋ ಒಬ್ಬ ವಾನರನೆಂದು ಕೊಂಡನೇ ಹೊರತು, ನನ್ನನ್ನು ಇದಿರಿಸಿ ನಿಲ್ಲುವಂತಹ ವೀರನಾಗುವೆ ಎಂದು ಭಾವಿಸಲಿಲ್ಲ " ಎಂದು ಅವ ಹೇಳನ ಮಾಡಿದನು.

" ರಾಮಾ ! ಅದೆಲ್ಲಾ ನಿನ್ನ ದಿವ್ಯ ಪಾದದ ಮಹಿಮೆಯೋ ಎಂದು ಈಗತಾನೇ ಹೇಳಿದೆನಲ್ಲ ? " ಎಂದನು ಹನುಮಂತ.

ರಾಮನು ಧನುಸ್ಸನ್ನೆತ್ತಿ ಬಾಣವನ್ನು ಸಂಧಿಸಿದನು. ಹನುಮಂತನು ಬೃಹದಾಕಾರನಾಗಿ ನಿಂತು ತನ್ನ ಬಾಲವನ್ನು ಗಿರಗಿರನೆ ತಿರುಗಿಸತೊಡಗಿದನು. ರಾಮನು ಪ್ರಯೋಗಿಸಿದ ಅಸ್ತ್ರಗಳೆಲ್ಲವನ್ನೂ ಹನುಮಂತನು ತನ್ನ ಬಾಲದ ರಭಸದಲ್ಲೇ ತಡೆದು ಅವೆಲ್ಲಾ ಅಡ್ಡಡ್ಡ ತಪ್ಪಿ ಹೋಗಿ ಬೀಳುವಂತೆ ಮಾಡುತ್ತಿದ್ದನು.

ಆ ಸಮಯದಲ್ಲಿ ವಿಶ್ವಾಮಿತ್ರನು ದೊಡ್ಡ ದೊಡ್ಡ ಪದಾಂಗಗಳನ್ನಿಡುತ್ತ ಅಲ್ಲಿಗೇ ಬರುತ್ತಿದ್ದನು. ಯಯಾತಿಯನ್ನು ಕೊಲ್ಲುವ ಬದಲು ಹನುಮಂತನನ್ನು ಕೊಲ್ಲುತ್ತಾನೆಯೋ ರಾಮ ?

ರಾಮನು ಪ್ರಯೋಗಿಸಿದ ಒಂದೊಂದು ಅಸ್ತ್ರಕ್ಕೂ ಹನುಮಂತನು ಶರೀರವನ್ನು ಬೆಳೆಸುತ್ತ, ವಿಶ್ವರೂಪನಾಗುತ್ತಿದ್ದನು. ರಾಮನು ಹನುಮಂತನ ಕಂಠಕ್ಕೆ ಬಾಣದ ಗುರಿಯನ್ನು ಹಿಡಿದು, ನಡುನೆತ್ತಿಯಲ್ಲಿರುವ ಆಕಾಶಕ್ಕೆ ಗುರಿಹಿಡಿಯುವ ಸ್ಥಿತಿಗೇ ಬಂದಿತು. ಆಗ ಹನುಮಂತನು ತಟ್ಟನೆ ವೀರಾಸನ ಹಾಕಿ ಕುಳಿತು, " ರಾಮಾ, ನಿನಗೆ ಕುತ್ತಿಗೆ ನೋವು ಬಂದರೆ ಸಹಿಸಲಾರೆ. ಈಗ ನಿನ್ನ ಗುರಿಗೆ ಸರಿಯಾಗಿ ಕೊರಳಿದೆ ನೋಡು " ಎಂದನು.

ರಾಮನು ಒಮ್ಮೆಗೇ ಮಹೋಗ್ರನಾಗಿ, " ಎಲೋ ಗರ್ವಿಷ್ಠ ಹನುಮಾ ! ಇದೇ ಕೊನೆಯ ಬಾಣ ! ನಿನ್ನ ಎದೆಗೇ ಗುರಿಯಿಟ್ಟು ಪ್ರಯೋಗಿಸುತ್ತೇನೆ ! ಇದರಿಂದ ನಿನ್ನದೂ ನನ್ನದೂ ಕೆಲಸ ಏಕಕಾಲದಲ್ಲಿ ಮುಗಿಯುತ್ತದೆ." ಎನ್ನುತ್ತಾ ಅರ್ಧ ಚಂದ್ರಾಕೃತಿಯ ರಾಮಬಾಣವನ್ನು ತೆಗೆದು ಬಿಲ್ಲಿಗೆ ಸಂಧಿಸಿದನು.

ಅಷ್ಟರಲ್ಲಿ ವಿಶ್ವಾಮಿತ್ರನು ಓಡೋಡಿ ಅಲ್ಲಿಗೆ ಬಂದು " ರಾಮಾ ! ಯುದ್ಧ ನಿಲ್ಲಿಸು ! ಹನುಮಂತನೊಂದಿಗೆ ಪ್ರಸನ್ನನಾಗು ! ಯಯಾತಿ ನಿನ್ನ ದಾಸನ ತಾಯಿಯಾದ ಅಬಲೆಯ ಮುಂದೆ ಶರಣಾಗತನಾದಾಗಲೇ ಸತ್ತಹಾಗಾದನು ! ನನ್ನ ಕೋಪವೂ ದುಡುಕಿಗೆ ಕಾರಣವಾಯಿತೆಂದು ತೋರುತ್ತದೆ. ಅವನ ಅಪರಾಧವು ಕ್ಷಮಿಸ ತಕ್ಕಂತಹುದೇ ! ಸಾಕು ನಿಲ್ಲಿಸು ! " ಎಂದನು.

ರಾಮನು ತಲೆಯಾಡಿಸುತ್ತಾ, " ಸಾಧ್ಯವಿಲ್ಲ ಗುರುದೇವಾ ! ನಾನು ಹೂಡಿದ ಅಸ್ತ್ರ ಹಾಗೇ ನಿಂತಿದೆ. ಅದು ಪ್ರಯೋಗವಾಗಲೇ ಬೇಕು. ತಡೆಯಬೇಡಿ ! " ಎಂದನು.

"ಹನುಮಾ! ಎಚ್ಚರ! ವೃಥಾ ಸಾಯಬೇಡ. ಈಗಲಾದರೂ ನಿನ್ನ ಅಹಂಕಾರವನ್ನು ಬಿಟ್ಟು ಯಯಾತಿಯನ್ನು ನನಗೆ ಕೊಡು. ನಿಜವಾದ ರಾಮನ ಬಂಟನೆಂದು ಹೆಸರುಪಡೆ!" ಎಂದನು ರಾಮ ಬಿಲ್ಲಿನ ನಾಣನ್ನು ಎಳೆಯುತ್ತ.

ಹನುಮಂತನು ಸ್ಥಿರಚಿತ್ತದಿಂದ, "ಆಗಲೂ ಈಗಲೂ ನಾನು ರಾಮನ ಬಂಟನೇ. ಶರಣಾಗತನನ್ನು ಕಾಪಾಡದೆ ಅರ್ಧದಲ್ಲಿ ಬಿಟ್ಟುಬಿಡುವವನು ನಿನ್ನ ಬಂಟನಾಗಿರಲು ಸಾಧ್ಯವಿಲ್ಲ. ಅದು ನಿನಗೇ ಅವಮಾನ. ಬೇಗನೇ ನಿನ್ನ ಬಾಣವನ್ನು ಬಿಡು. ಹೃದಯಪೂರ್ವಕವಾಗಿ ನಿನ್ನ ಬಾಣವನ್ನು ಸ್ವಾಗತಿಸುತ್ತೇನೆ!" ಎಂದು ತನ್ನ ಎದೆಯುನ್ನು ಎರಡು ಕೈಗಳಿಂದ ಒತ್ತಿ ಸೀಳಿ ಅಸ್ತ್ರದ ಗುರಿಗೆ ನೇರಾಗಿ ಒಡ್ಡಿ ಹಿಡಿದನು. ರಾಮನು ಕೈಬಿಟ್ಟ ಬಾಣವು ಅವನ ಗುಂಡಿಗೆಯೊಳಗೆ ಹೊಕ್ಕು ಅದೃಶ್ಯವಾಯಿತು. ಅದೇ ಹೊತ್ತಿಗೆ ಹನುಮಂತನ ಗುಂಡಿಗೆ ದೇದೀಪ್ಯಮಾನವಾಗಿ ಪ್ರಕಾಶಿಸುತ್ತಾ, ಅದರೊಳಗೆ ರಾಮನ ಪ್ರತಿರೂಪವು ಎಲ್ಲರಿಗೂ ಗೋಚರಿಸಿತು. ಈ ಅದ್ಭುತವನ್ನು ನೋಡಿದವರು ನಿಶ್ಚೇಷ್ಟಿತರಾದರು.

ರಾಮನು ಧನುಸ್ಸನ್ನು ಕೆಳಗಿಳಿಸಿ, "ಹನುಮಾ! ನೀನು ಅಜೇಯನಪ್ಪಾ, ನಾನೇ ಸೋತುಹೋದೆನು" ಎಂದನು. ವಿಶ್ವಾಮಿತ್ರನು ಕೂಡಲೇ "ಇಲ್ಲ ರಾಮಾ! ನಿನ್ನೊಂದಿಗೇ ನೀನು ಹೋರಾಡಿದೆ. ಇದರಲ್ಲಿ ಜಯಾಪಜಯದ ಮಾತೇ ಇಲ್ಲ" ಎಂದನು.

"ನಿಜ ನಿಜ!" ಎಂದು ಆಕಾಶದಲ್ಲೆಲ್ಲಾ ಅಶರೀರವಾಣಿ ಮೊಳಗಿತು.

ಆಗ ಹನುಮಂತನು ಗುಂಡಿಗೆಯನ್ನು ಬಿಡಿಸಿ ಹಿಡಿದ ತನ್ನ ಕೈಗಳನ್ನು ಬಿಟ್ಟ ಕೂಡಲೇ ಗುಂಡಿಗೆ ಯಥಾಪ್ರಕಾರ ಮುಚ್ಚಿಕೊಂಡಿತು. "ರಾಮಾ! ಇದರಲ್ಲಿ ಜಯಾಪಜಯಗಳು ಯಾರದೂ ಅಲ್ಲ. ನಿನ್ನ ಅಸ್ತ್ರವನ್ನು ನನ್ನ ಹೃದಯದಲ್ಲಿರುವ ನೀನೇ ಸ್ವೀಕರಿಸಿದೆ. ಅದು ನಿನ್ನಲ್ಲೇ ಲೀನವಾಯಿತು. ಇದರಲ್ಲಿ ನನ್ನ ಪ್ರತಾಪ ಏನೂ ಇಲ್ಲ" ಎಂದನು ಹನುಮಂತ ತಲೆಬಾಗಿ ನಮಸ್ಕರಿಸುತ್ತ.

ವಿಶ್ವಾಮಿತ್ರನು ಹನುಮಂತನ ಬಳಿಗೆ ಹೋಗಿ ಬೆನ್ನು ತಟ್ಟುತ್ತ, "ಹನುಮಂತಾ, ಶರಣಾಗತ ರಕ್ಷಣೆಯಲ್ಲಿ ನೀನು ರಾಮನಂತಹನೊಂದಿಗೆ ಎದೆಯೊಡ್ಡಿ ಪ್ರತಿಜ್ಞಾಪಾಲನೆಯನ್ನು ನೆರವೇರಿಸಿ ಈಗ ನಿಜವಾದ ವೀರನಾದೆ. ವೀರಹನುಮಾನ್ ಎಂಬ ಸಾರ್ಥಕನಾಮ ನಿನ್ನದಾಯಿತು" ಎಂದು ಮುಕ್ತಕಂಠದಿಂದ ಹೊಗಳಿದನು.

ಅನಂತರ ಹನುಮಂತನು ಸೀತಾರಾಮರಿಗೆ ನಮಸ್ಕಾರ ಮಾಡಿ, ಗಂಧಮಾದನ ಪರ್ವತಕ್ಕೆ ಹೋಗಿ ಅಲ್ಲಿ ತಪಸ್ಸು ಮಾಡಲು ಕುಳಿತನು.

